ओ३म्

ಋಗ್ವೇದ | ಸಾಮವೇದ

# ವೇದಪ್ರಕಾಶ

ಯಜುರ್ವೇದ | ಅಥರ್ವವೇದ



ಸಂಪುಟ ೮ | ದುಂದುಭಿ ಸಂವತ್ಸರ ವೈಶಾಖ-ಜ್ಯೇಷ್ಠ-ಮೇ-ಜೂನ್ - ೧೯೮೨ | ಸಂಚಿಕೆ ೨-೩

ಸತ್ಯದರ್ಶಕರಿಗೆ—ತತ್ತ್ವನಿಷ್ಠರಿಗೆ—ವಿಚಾರವಾದಿಗಳಿಗೆ

ಮೆಚ್ಚಿಗೆಯ ಮಾಸಪತ್ರಿಕೆ

ವಿಷಯ ಸೂಚಿ — ಪುಟ ಸಂಖ್ಯೆ



**ಸಂ ಶ್ರುತೇನ ಗಮೇಮಹಿ ಮಾ ಶ್ರುತೇನ ವಿ ರಾಧಿಷಿ ।** [ಅಥರ್ವ: ೧-೧-೪]

"ನಾವು ಸದಾ ವೇದವಾಣಿಯೊಂದಿಗೆ ಸಂಯುಕ್ತರಾಗಿರೋಣ.
ಎಂದೆಂದಿಗೂ ವೇದದಿಂದ ವಿಮುಖರಾಗದಿರೋಣ".

## ಚಂದಾದಾರರಾಗುವ ಬಗ್ಗೆ ವಿಶೇಷ ಮಾಹಿತಿ

[೧] 'ವೇದಪ್ರಕಾಶ'ದ ವಾರ್ಷಿಕ ಚಂದಾ ರೂ. 15-00 [ಅಂಚೆ ವೆಚ್ಚ ಸೇರಿ] ಆಜೀವ ಸದಸ್ಯತನ 150-00.

[೨] ಚಂದಾ ಕಳುಹಿಸುವವರು ಎಂ.ಓ. ಅಥವಾ ಎಂ,ಟಿ. ಮೂಲಕ ಕಳುಹಿಸಬಹುದು.

[೩] ಎಂ. ಟಿ. ಮೂಲಕ ಹಣ ಕಳುಹಿಸುವವರು, V. S. P. Samithi A/c, No. 12829, ಸಿಂಡಿಕೇಟ್ ಬ್ಯಾಂಕ್, ಕಾರ್‌ಸ್ಟ್ರೀಟ್, ಉಡುಪಿ-1 ಕ್ಕೆ ಸಿಂಡಿಕೇಟ್ ಬ್ಯಾಂಕಿನ ಯಾವುದೇ ಶಾಖೆಯಿಂದ ಕಳುಹಿಸಬಹುದು. ಇದಕ್ಕೆ ಕಮಿಶನ್ ತೆರಬೇಕಾದುದಿಲ್ಲ.

[೪] ಪತ್ರ ವ್ಯವಹಾರದ ವಿಳಾಸ:
ಪ್ರಕಾಶಕರು, "ವೇದಪ್ರಕಾಶ" ಕುಂಜಿಬೆಟ್ಟು, ಉಡುಪಿ-576 102.

**ಪ್ರಧಾನ ಸಂಪಾದಕರು**
ಶ್ರೀ ಪಂ॥ ಸುಧಾಕರ ಚತುರ್ವೇದೀ
ಜಯನಗರ, ಬೆಂಗಳೂರು

**ಉಪಸಂಪಾದಕರು**
ಶ್ರೀ ಪಂ॥ ಮಂಜುನಾಥ ಶಾಸ್ತ್ರಿ, ಎಂ. ಎ.

**ಸಹಾಯಕ ಸಂಪಾದಕರು**
ಶ್ರೀ ಕೆ. ಎ. ಶೇಷಾಚಲಪತಿ, ಬಿ. ಎ.

**ಪ್ರಕಾಶಕರು**
ಶ್ರೀ ಪ॥ ಸಂಜೀವ ಕಾಮತ್,
ವೈದಿಕ ಸಾಹಿತ್ಯ ಪ್ರಕಾಶನ ಸಮಿತಿ
ಕುಂಜಿಬೆಟ್ಟು, ಉಡುಪಿ-೫೭೬ ೧೦೨

**ಸಂಪಾದಕ ಮಂಡಲಿ**
ಡಾ॥ ಪ. ನಾರಾಯಣರಾವ್, M. A., Ph.D.
ಶ್ರೀ ಕು. ಶಿ. ಹರಿದಾಸ ಭಟ್, ಎಂ. ಎ.
ಶ್ರೀ ವೇದವ್ರತ, B.Sc., M.A., B.Ed.
ಶ್ರೀ ಜ್ಯೇಷ್ಠವರ್ಮನ್, ಎಂ. ಎ. ಮುಂಬಯಿ
ಶ್ರೀ ಸುಕುಮಾರಶಾಸ್ತ್ರಿ, ಎಂ. ಎ., (ಸಂ-ಹಿಂ)
ಶ್ರೀ ಗುಂಡ್ಮಿ ಚಂದ್ರಶೇಖರ ಐತಾಳ, ಎಂ. ಎ.

**ಮುದ್ರಕರು:**
ಶ್ರೀ ಗಣೇಶ್ ಪ್ರಿಂಟರ್ಸ್, ಅಳಕೆ, ಮಂಗಳೂರು
ವಾರ್ಷಿಕ ಚಂದಾ: ಅಂಚೆ ಸೇರಿ ರೂ. ೧೫-೦೦
ಆಜೀವ ಸದಸ್ಯರಿಗೆ ರೂ ೧೫೦-೦೦

## ಚಂದಾದಾರರಲ್ಲಿ ಮನವಿ

ಎಂಟನೆಯ ಸಂಪುಟಕ್ಕೆ ಚಂದಾ ಹಣವನ್ನು ಈ ವರೆಗೆ ಕಳುಹಿಸದಿರುವ ಹಿಂದಿನ ಚಂದಾದಾರರಿಗೂ ದ್ವಿತೀಯ ಸಂಚಿಕೆಯನ್ನು ಕಳುಹಿಸಿದ್ದೇವೆ. ತಲುಪಿದ ಕೂಡಲೇ ದಯಮಾಡಿ ಚಂದಾ ಕಳುಹಿಸಿ ಸಹಕರಿಸಬೇಕಾಗಿ ವಿನಂತಿ. ಅದರಂತೆಯೇ ಆಜೀವ ಸದಸ್ಯರಾದವರೂ ಸಹ ಬಾಕಿ ಹಣವನ್ನು ಕೂಡಲೇ ಕಳುಹಿಸಬೇಕಾಗಿ ನಮ್ಮ ವಿನಂತಿ. ಮಾನ್ಯ ಪ್ರಕಾಶಕರು ವಾಹನದ ಅಪಘಾತಕ್ಕೀಡಾಗಿ ಆಸ್ಪತ್ರೆ ಸೇರಿದುದರಿಂದ ನಾವು ಎಲ್ಲರನ್ನೂ ಪ್ರತ್ಯಕ್ಷ ಸಂದರ್ಶಿಸಲಾಗದ ಸ್ಥಿತಿಯಲ್ಲಿದ್ದೇವೆ. ಈ ಪರಿಸ್ಥಿತಿಯನ್ನು ಗಮನಿಸಿ ತಮ್ಮ ಹಾರ್ದಿಕ ಸಹಕಾರವನ್ನು ನೀಡಬೇಕಾಗಿ ನಮ್ರ ವಿನಂತಿ.

—ವೈದಿಕ ಸಾಹಿತ್ಯ ಪ್ರಕಾಶನ ಸಮಿತಿ.



# ವೇದಪ್ರಕಾಶ



| ಸಂಪುಟ ೮ | ದುಂದುಭಿ ಸಂವತ್ಸರ ವೈಶಾಖ, ಜ್ಯೇಷ್ಠ–ಮೇ, ಜೂನ್ ೧೯೮೨ | ಸಂಚಿಕೆ ೧ |
| --- | --- | --- |

## ವೈದಿಕ ಪ್ರಾರ್ಥನೆ



**ಓಂ ಉದುತ್ತಮಂ ಮುಮುಗ್ಧಿ ನೋ ವಿಪಾಶಂ ಮಧ್ಯಮಂ ಚೃತ।**
**ಅವಾಧಮಾನಿ ಜೀವಸೇ ॥** [ಋಗ್ವೇದಃ– ೧. ೨೪. ೨೧.]

[ಓಂ] ಹೇ ಪರಮಾತ್ಮನೇ! [ಜೀವಸೇ] ಜೀವಿಸುವುದಕ್ಕಾಗಿ, [ನಃ] ನಮ್ಮ, [ಉತ್ತಮಂ] ಉತ್ತಮವಾದ, ಸಾತ್ವಿಕವಾದ, [ಪಾಶಂ] ಬಂಧನವನ್ನು, [ಉತ್ ಮುಮುಗ್ಧಿ] ಮೇಲ್ಮುಖವಾಗಿ ಬಿಡಿಸು. [ಮಧ್ಯಮಂ] ನಡುವಣ, ರಾಜಸಿಕವಾದ ಬಂಧನವನ್ನು, [ವಿ] ಅಗಲವಾಗಿ, ನಾಲ್ಕೆಡೆಗೂ, [ಚೃತ] ಎಳೆದು ಹಾಕು, [ಅಧಮಾನಿ] ನಿಕೃಷ್ಟವಾದ, ತಾಮಸಿಕ ವಾದ ಬಂಧನಗಳನ್ನು, [ಅವ ಚೃತ] ಕೆಳಕ್ಕೆ ಕೆಡಹಿಬಿಡು.

ಓ ವರುಣ ದೇವ! ನಿನ್ನ ಹೆಸರೇ 'ವರುಣ'–'ನಿವಾರಿಸುವವನು'– ಎಂದು. ಸರ್ವ ಪಾಶವಿಮೋಚಕನು ನೀನೇ ಆಗಿದ್ದೀಯೆ. ಪ್ರಭೋ! ನಾವು ಜೀವಿಸಬಯಸುತ್ತೇವೆ; ಮಾನವರಂತೆ ಜೀವಿಸಬಯಸುತ್ತೇವೆ. ಆದರೆ, ತಲೆಯಲ್ಲೊಂದು, ಎದೆಯಲ್ಲೊಂದು, ಕೈಕಾಲು ಗಳಲ್ಲೊಂದು–ಹೀಗೆ ಮೂರು ಬಂಧನಗಳು ಸುತ್ತಿಹಾಕಿಕೊಂಡು ನಮ್ಮ ಬಾಳನ್ನು ಸಾವಿ ಗಿಂತಲೂ ಕೀಳಾಗಿ ಮಾರ್ಪಡಿಸುತ್ತಿವೆ. ಮೆದುಳು, ಬುದ್ಧಿ, ಸತ್ವಗುಣದ ಲಕ್ಷಣವಾದ ಜ್ಞಾನದ ನೆಲೆಯಾಗಿರುವುದರಿಂದ, ಬುದ್ಧಿಯ ಬಂಧನ–ಸಾತ್ವಿಕ ಬಂಧನ; ಹೃದಯ, ರಜೋ ಗುಣದ ಲಕ್ಷಣಗಳಾದ ರಾಗದ್ವೇಷಗಳ ನೆಲೆಯಾಗಿರುವುದರಿಂದ, ಹೃದಯದ ಬಂಧನ ರಾಜಸ ಬಂಧನ; ಶರೀರವು ತಮೋಗುಣದ ಲಕ್ಷಣವಾದ ಜಡತೆಯ ನೆಲೆಯಾಗಿರುವುದರಿಂದ, ಶಾರೀ ರಿಕ-ಬಂಧನ ತಾಮಸ ಬಂಧನ. ಪ್ರಕೃತಿಯ ತ್ರಿಗುಣಗಳಿಗೆ ಸಂಬಂಧಿಸಿದ ಈ ಮೂರು ಬಂಧನ ಗಳೂ ಬಿಗಿದುಕೊಂಡಿರುವಾಗ, ನಮಗೆ ಸುಖವೆಲ್ಲಿ? ನಮಗೆ ಶಾಂತಿ ಎಲ್ಲಿ? ಆದರೂ, ಓ ನಮ್ಮ ಕರುಣಾಳು ತಂದೆ! ನಮ್ಮ ಉದ್ಧಾರಕ್ಕಾಗಿಯೇ ನೀನು ದಯಪಾಲಿಸಿರುವ ಈ ಪ್ರಾಕೃತಿಕ ಜೀವನವನ್ನು ನಾವು ತಿರಸ್ಕರಿಸಲಾರೆವು. 'ಬೇಡ' ಎನ್ನಲಾರೆವು. ನಾವು ಸಾಯಬಯಸೆವು; ಜೀವಿಸಬೇಕೆಂಬುದೇ ನಮ್ಮ ಬಯಕೆ. ನಮ್ಮ ಬೌದ್ಧಿಕ ಬಂಧನದ ಬಿಗಿ ಹೆಚ್ಚಾದಾಗ, ನಾವು– "ನಾವು ಮಹಾಬುದ್ಧಿವಂತರು- ಮಹಾಜ್ಞಾನಿಗಳು. ನಮಗೆ ನೀತಿ ಹೇಳಬಲ್ಲವರಾರಿದ್ದಾರೆ?"– ಎಂದುಕೊಂಡು, ಅಹಂಕಾರ ಮದದಲ್ಲಿ ಲೀನರಾಗಿ ದಾರಿತಪ್ಪುತ್ತೇವೆ; ಹಾಗಾಗದಂತೆ, ನಮ್ಮ ಬುದ್ಧಿಯ ಬಂಧನವನ್ನು ಮೇಲಮೇಲಕ್ಕೆ ಎಳೆದುಕೊಳ್ಳುತ್ತಾ ಹೋಗು. ದಿನದಿನಕ್ಕೂ ನಮಗೆ ನಿನ್ನ ಉನ್ನತೋನ್ನತಗುಣಗಳ ಹೆಚ್ಚುಹೆಚ್ಚು ಜ್ಞಾನವುಂಟಾಗಿ, ನಾವು ವಿನೀತರಾಗು ವಂತಾಗಲಿ. ನಮ್ಮ ಹಾರ್ದಿಕ ಬಂಧನ ಸೆಟೆತುಕೊಂಡಾಗ– "ನಮಗೆ ಬೇಕಾದುದು ಸುಖ; ನಮಗೆ ಬೇಡವಾದುದೇ ದುಃಖ"—ಎಂದು ಭಾವಿಸಿ, ಬೇರೆಯವರಿಗೂ ನಮ್ಮಂತೆಯೇ ಸುಖ–

ದುಃಖಗಳಿವೆ- ಎಂಬುದನ್ನೇ ಮರೆತು, ಮಹಾಸ್ವಾರ್ಥಿಗಳಾಗಿ, ಎಲ್ಲರ ಜೀವಿತವನ್ನೂ ದುಃಖದ ಹೊರೆಯಾಗಿ ಮಾಡಹತ್ತುತ್ತೇವೆ. ಸ್ವಾಮೀ! ನಾವು ಈ ರೀತಿ ನರಕದ ಕೃಮಿಗಳಾಗದಂತೆ, ನಮ್ಮ ಹೃದಯದ ಬಂಧನವನ್ನು ನಾಲ್ಕೆಡೆಗೂ ವಿಸ್ತರಿಸುತ್ತಾ ಹೋಗು; "ಸರ್ವರ ಸುಖದಲ್ಲಿ ನಮ್ಮ ಸುಖವೂ ಇದೆ; ಸರ್ವರ ದುಖದಲ್ಲೇ ನಮ್ಮ ದುಃಖವೂ ಇದೆ" ಎಂಬ ಉದಾತ್ತಭಾವನೆ ನಮ್ಮೆಲ್ಲರಲ್ಲಿಯೂ ಬೆಳೆಯುತ್ತಾ ಹೋಗಲಿ. ಮತ್ತು, ಹೇ ಜಗತ್ಪಿತ! ದೈಹಿಕ-ಬಂಧನವು ಬಿಗಿತಾಗ, ನಾವು- "ಆತ್ಮವಿಲ್ಲ; ಮನಸ್ಸೂ ಇಲ್ಲ. ಇರುವುದೆಲ್ಲಾ ದೇಹ ಒಂದೇ. ಅದರ ಸುಖವೇ ಸ್ವರ್ಗ; ಅದರ ದುಃಖವೇ ನರಕ. ಆದುದರಿಂದ, ಬೇಕೆನಿಸಿದುದನ್ನೆಲ್ಲಾ ತಿನ್ನೋಣ; ಬೇಕೆನಿಸಿದುದನ್ನೆಲ್ಲಾ ಕುಡಿಯೋಣ. ಬೇಕೆನಿಸಿದ ನರನಾರಿಯರಲ್ಲಿ ರಮಿಸೋಣ"- ಎಂಬ ಜಾಡ್ಯಕ್ಕೆ ಸಿಕ್ಕಿ, ಸರ್ವ ನಾಶದ ಹಾದಿಯಲ್ಲಿ ಕಾಲಿಡುತ್ತೇವೆ. ಹೇ ವರುಣದೇವ! ಹೀಗಾಗಲು ಅವಕಾಶವಿಲ್ಲದಂತೆ, ಭೌತಿಕಭೋಗವಿಲಾಸಗಳ ಪ್ರವೃತ್ತಿಮಯವಾದ ಈ ಅಧಮ ಬಂಧನವನ್ನು ಕೆಳಕ್ಕೆ ಸರಿಸಿಹಾಕು. "ಈ ದೇಹ ಎಂದಿದ್ದರೂ ಒಂದು ಹಿಡಿ ಬೂದಿಯಾಗತಕ್ಕದ್ದೇ. ಇದಕ್ಕಾಗಿ ನಾವು ಆತ್ಮನಿಗೆ ಅಧೋಗತಿ ತಾರದಿರೋಣ"—ಎಂಬ ಜಾಗೃತಿ ನಮಗುಂಟಾಗಲಿ.

ಪ್ರಭೋ! ಹೀಗೆ ಬೌದ್ಧಿಕ ಬಂಧನವನ್ನು ಮೇಲಕ್ಕೆಳೆದು ಹಾಕಿ ನಮ್ಮ ಅಹಂಕಾರವನ್ನು ಚೂರುಮಾಡು; ಹಾರ್ದಿಕ ಬಂಧನವನ್ನು ವಿಶಾಲಗೊಳಿಸಿ, ಸ್ವಾರ್ಥಭಾವನೆಯ ಬುಡಕ್ಕೆ ಕೊಡಲಿಯ ಪೆಟ್ಟನ್ನು ಹಾಕು; ಶಾರೀರಿಕ ಬಂಧನವನ್ನು ಕೆಳಕ್ಕೆ ಸರಿಸಿ, ನಗ್ನಜಡವಾದದ [Naked Materialism] ಮರ್ಮವನ್ನು ಸೀಳಿಹಾಕು. ನಾವು ವಿನೀತರಾಗಿ, ಉದಾರರಾಗಿ, ಅಧ್ಯಾತ್ಮವಾದಿಗಳಾಗಿ ಮಾನವೀಯ ಜೀವನವನ್ನು ನಡೆಸುವ ಸಾಮರ್ಥ್ಯವನ್ನು ನಮಗೆ ಕರುಣಿಸು.

॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

---

ಓಂ ॥ ಸತ್ಯಮೇವ ಜಯತೇ ನಾಽನೃತಂ ॥ ಓಂ ॥

## ವೇದಪ್ರಕಾಶದ- ಕಾಮನೆ

ಆತ್ಮೀಯರಾದ ಬಂಧು ಭಗಿನಿಯರೇ! ಕಳೆದ ಸಂಚಿಕೆಯಲ್ಲಿ ತಿಳಿಸಿದಂತೆ, ನಮ್ಮ ಪ್ರಕಾಶಕರ ಸ್ವಾಸ್ಥ್ಯವು ಸುಧಾರಿಸದೆ ಇರುವುದರಿಂದ ಮೇ ಮತ್ತು ಜೂನ್ ತಿಂಗಳ ಸಂಯುಕ್ತ ಸಂಚಿಕೆಯಾಗಿ ಈ ಸಂಚಿಕೆ ಹೊರಗೆ ಬರುತ್ತಿದೆ. ವೈದ್ಯರ ಅಭಿಪ್ರಾಯದಂತೆ ಇನ್ನೂ ನಾಲ್ಕಾರು ತಿಂಗಳುಗಳವರೆಗೆ ಪೂರ್ವಸ್ಥಿತಿಗೆ ಬರಲು ಸಾಧ್ಯವಾಗದು ಎಂದಿರುವುದರಿಂದ ಮುಂದಿನ ಎರಡು ಸಂಚಿಕೆಗಳು ಸಂಯುಕ್ತ ಸಂಚಿಕೆಗಳಾಗಿಯೇ ಪ್ರಕಟವಾಗುವುವು. ಪ್ರಿಯ ವಾಚಕರೂ, ನಮ್ಮ ಸದಸ್ಯ ಬಳಗದವರೂ ಈ ಪರಿಸ್ಥಿತಿಯನ್ನು ತಿಳಿದು ಸಹಕರಿಸಬೇಕಾಗಿ ವಿನಂತಿ. ಆದಷ್ಟು ಬೇಗ ಒಂದು ಟ್ರಸ್ಟಿನ ಮೂಲಕ ವೇದಗಳ ಸಂಶೋಧನೆಯ ಕೆಲಸವನ್ನು ನಡೆಸಬೇಕೆಂಬ ಸಂಕಲ್ಪವಿರುವುದರಿಂದ ಹಾಗೂ ವೈದಿಕ ಸಿದ್ಧಾಂತಗಳ ಪೂರ್ಣಪರಿಚಯ ಜನತೆಗೆ ಮಾಡಿಸಬೇಕೆಂಬ ಸದಿಚ್ಛೆಯಿಂದ ಪ್ರಕಟವಾಗುವ 'ವೇದಪ್ರಕಾಶ'ದ ಸಂಚಿಕೆಗಳು ಮುಂದೆ ಅತ್ಯುನ್ನತಮಟ್ಟದಲ್ಲಿ ಹೊರಬರುವುವು.

ರಾಜಕೀಯದಲ್ಲಿ ಯಾವ ರೀತಿ ಭ್ರಷ್ಟಾಚಾರವು ನಡೆಯುತ್ತದೆಯೋ ಅದೇ ರೀತಿ ಧರ್ಮದ ಮತ್ತು ದೇವರ ಹೆಸರಿನಲ್ಲಿ ನಡೆಯುತ್ತಿರುವ ಭ್ರಷ್ಟಾಚಾರಗಳು ಕಡಿಮೆಯೇನಲ್ಲ. ಅಜ್ಞ ಜನತೆ ಇದನ್ನು ತಿಳಿಯದೆ ವಂಚಿತರಾಗುವುದು ಸ್ವಾಭಾವಿಕ. ಜನತೆಯಲ್ಲಿರುವ ಅಜ್ಞಾನವನ್ನು ನಿವಾರಿಸುವುದು ನಮ್ಮ ಕರ್ತವ್ಯ. ಪಾಶ್ಚಾತ್ಯರೂ ಸಹ ಬೆಚ್ಚಿ ಬೆರಗಾದ, ವೈಜ್ಞಾನಿಕವಾದ ವೈದಿಕ ಸಾಹಿತ್ಯವನ್ನು ಜನತೆಗೆ ಅರ್ಪಿಸಿ ಮಾನವ ಸಮಾಜದ ಏಕೀಕರಣ ಕ್ಕಾಗಿ ಪ್ರಯತ್ನಿಸುವುದು 'ವೇದಪ್ರಕಾಶ'ದ ಸಂಕಲ್ಪವಾಗಿದೆ. ಇದು ಸಾರ್ಥಕವಾಗ ಬೇಕಾದರೆ 'ವೇದಪ್ರಕಾಶ'ದ ಬಳಗವನ್ನು ಬೆಳೆಸುವುದು ವಿದ್ವಜ್ಜನರ ಹಾಗೂ ವಿದ್ಯಾವಂತರ, ವಿಚಾರವಾದಿಗಳ ಕರ್ತವ್ಯವಾಗಿದೆ. ಇದರ ಬಗ್ಗೆ ಜಾತಿ ಮತಗಳ ಸ್ವಾರ್ಥಗಳನ್ನು ಬದಿಗೊತ್ತಿ ಸರ್ವರ ಆತ್ಮಕಲ್ಯಾಣದ ಮಾರ್ಗವನ್ನು ತಿಳಿದು ಅದರಂತೆ ಸಾರ್ವತ್ರಿಕ ಏಳಿಗೆಯ ಸಾಧನೆಗೆ ಪ್ರಯತ್ನಿಸಬೇಕು. ಇದರ ಬಗ್ಗೆ ಪ್ರತಿಯೋರ್ವನೂ ತನ್ನೊಳಗಿರುವ ಜೀವಾತ್ಮನ ಗುಣ ಗಳನ್ನು ಅರಿತುಕೊಳ್ಳುವುದು ಅತ್ಯಗತ್ಯ. ಮಹರ್ಷಿ ಗೌತಮರು ತಮ್ಮ ನ್ಯಾಯದರ್ಶನದಲ್ಲಿ ಜೀವಾತ್ಮನ ಗುಣವನ್ನು ಈ ರೀತಿ ವರ್ಣಿಸಿದ್ದಾರೆ:-

**ಇಚ್ಛಾ ದ್ವೇಷ ಪ್ರಯತ್ನ ಸುಖಃದುಃಖ ಜ್ಞಾನಾನ್ಯಾತ್ಮನೋ ಲಿಂಗಮಿತಿ ||**

[ನ್ಯಾಯದರ್ಶನ: ೧-೧-೧೦]

ಎಂದರೆ, ಇಚ್ಛಾ, ದ್ವೇಷ, ಪ್ರಯತ್ನ, ಸುಖ, ದುಃಖ, ಜ್ಞಾನ ಇವುಗಳು ಆತ್ಮನ ಕುರುಹು. ಇವೇ ಜೀವಾತ್ಮನ ಆರು ಗುಣಗಳು. ಹಿತವಾದುದನ್ನು ಬೇಕೆನ್ನುವುದು ಇಚ್ಛೆ; ಅಹಿತವಾದುದನ್ನು ಬೇಡವೆನ್ನುವುದು ದ್ವೇಷ; ಬೇಕಾದುದನ್ನು ಪಡೆಯಲು, ಬೇಡವಾದುದನ್ನು ತ್ಯಜಿಸಲು ದುಡಿಯುವುದು ಪ್ರಯತ್ನ; ಇಂದ್ರಿಯಗಳಿಗೆ ಹಿತವೆನಿಸುವುದು ಸುಖ; ಇಂದ್ರಿಯಗಳಿಗೆ ಅಹಿತವೆನಿಸುವುದು ದುಃಖ; ಈ ಎಲ್ಲಾ ತತ್ವ ಹಾಗೂ ಸ್ಥಿತಿಗಳ ತಿಳುವಳಿಕೆಯೇ ಜ್ಞಾನ. ಈ ಗುಣಗಳು ಪ್ರತಿಯೊಬ್ಬ ಜೀವನಲ್ಲಿಯೂ ಸ್ವರೂಪತಃ ಇರುತ್ತವೆ. ಇವುಗಳನ್ನು ಅರಗಿಸಿ ಕೊಳ್ಳುವುದೇ ಈ ಗುಣಗಳ ವಿಕಾಸ. ಹಾಗೆಂದರೇನು? ಆತ್ಮನ ಮೊದಲ ಗುಣ ಇಚ್ಛೆ ತಾನೆ? ಹಿತವಾದುದನ್ನು ಬಯಸುವುದು ಇಚ್ಛೆ. ಅದು ಒಬ್ಬನ ಮಟ್ಟಿಗೆ ಆದಲ್ಲಿ ಸಂಕುಚಿತ ವಾಗಿರುತ್ತದೆ. "ನನ್ನೊಬ್ಬನಿಗಲ್ಲ! ಎಲ್ಲರಿಗೂ ಹಿತವಾದುದನ್ನೇ ನಾನು ಬಯಸುವೆ" ಎಂಬುದು ಆ ಗುಣದ ವಿಕಾಸ. ಅಹಿತವಾದುದನ್ನು ಬಯಸದಿರುವುದು ತಾನೆ ದ್ವೇಷ? ''ನನ್ನೊಬ್ಬನಿಗಲ್ಲ; ಯಾರಿಗೂ ಅಹಿತವಾದುದನ್ನೂ ನಾನು ಬಯಸೆನು" ಎಂಬುದು ಅದರ ವಿಕಾಸ. ನನಗೆ ಬೇಕಾದುದನ್ನು ಪಡೆಯಲಿಕ್ಕೂ ಬೇಡವಾದುದನ್ನು ತೊಡೆಯಲಿಕ್ಕೂ ದುಡಿಯುವುದೇ ಅಲ್ಲವೇ ಪ್ರಯತ್ನ? "ನಾನು ನನ್ನೊಬ್ಬನಿಗೆ ಬೇಕಾದ್ದನ್ನು ಪಡೆಯಲು ಬೇಡ ವಾದುದನ್ನು ತೊಡೆಯಲು ಮಾತ್ರವಲ್ಲ; ಸರ್ವರ ಹಿತವನ್ನು ಸಾಧಿಸಲು, ಅಹಿತವನ್ನು ದೂರೀ ಕರಿಸಲು ದುಡಿಯುವೆನು'' ಎಂಬುದು ಅದರ ವಿಕಾಸ, ನನ್ನ ಇಂದ್ರಿಯಗಳಿಗೆ ಹಿತವೆಂದು ತೋರುವುದು ಸುಖವಲ್ಲವೇ? ''ನನ್ನೊಬ್ಬನ ಇಂದ್ರಿಯ ಹಿತವಲ್ಲ; ಸರ್ವರ ಇಂದ್ರಿಯಗಳ ಹಿತವೇ ನನ್ನ ಗುರಿ'' ಎಂಬುದೇ ಅದರ ವಿಕಾಸ. ನನ್ನ ಇಂದ್ರಿಯಗಳಿಗೆ ಹಿತವಲ್ಲದುದೇ ದುಃಖ; "ನನ್ನೊಬ್ಬನ ಇಂದ್ರಿಯಗಳಿಗೆ ಕೆಟ್ಟದೆನಿಸುವುದು ಮಾತ್ರ ದುಃಖವಲ್ಲ; ಯಾರ ಇಂದ್ರಿಯಗಳಿಗೆ ಕೆಟ್ಟದೆನಿಸಿದರೂ ಅದು ದುಃಖವೇ" ಎಂಬುದು ಅದರ ವಿಕಾಸ. ಅದೇ

ರೀತಿ, ತನ್ನೊಬ್ಬನಿಗೆ ಸಂಬಂಧಿಸಿದ ತತ್ವಗಳ ಸ್ಥಿತಿಗಳ ಅರಿವೇ ಜ್ಞಾನ; ನನ್ನಂತೆಯೇ ಎಲ್ಲರಿಗೂ ಇಚ್ಛಾ–ದ್ವೇಷಗಳಿವೆ; ಕ್ರಿಯಾಶೀಲತೆಯಿದೆ; ಸುಖ–ದುಃಖಗಳಿವೆ. ಇವೆಲ್ಲವುಗಳ ಅರಿವು ಇದೆ ಎಂಬುದೇ ಅದರ ವಿಕಾಸ.

ಹೀಗೆ "ಸ್ವಾರ್ಥ''ದ ಪರಿಧಿಯಿಂದ ಮೇಲೆದ್ದು, "ಪರಾರ್ಥ"ದ ಪರಿಧಿಯಲ್ಲಿ ಪ್ರವೇಶಿಸುವುದು, ಸ್ವ–ಪರ ಭೇದವನ್ನಳಿಸಿ ಹಾಕಿ, ಸರ್ವ ಕಲ್ಯಾಣ ಸಾಧನೆಗಾಗಿ ತನುಮನ ವಚನಾದಿಗಳಿಂದ ದುಡಿಯುವುದು ಜೀವಾತ್ಮನ ಗುಣಗಳ ವಿಕಾಸದ ಸ್ಫುಟವಾದ ಪ್ರಮಾಣ. ಅಧ್ಯಾತ್ಮ–ವಿಜ್ಞಾನ ಮಾನವನಿಗೆ ಕಲಿಸುವುದು ಇದೇ ಪಾಠವನ್ನು. 'ವೇದಪ್ರಕಾಶ' ಇದೇ ಸಂಕಲ್ಪದ ಸಾಧನೆಗಾಗಿ ಕಳೆದ ಏಳು ವರ್ಷಗಳಿಂದ ದುಡಿಯುತ್ತಾ ಬಂದಿದೆ. ಮುಂದೆ ಇದರ ವಿಸ್ತಾರ ಅಂದರೆ ವ್ಯಾಪಕವಾಗಿ ಜನರ ಮಸ್ತಿಷ್ಕದಲ್ಲಿ ಸರಿಯಾಗಿ ಅರ್ಥವಾಗುವಂತೆ ಸತ್ಯವಾದುದನ್ನೇ, ಧರ್ಮವಾದುದನ್ನೇ 'ವೇದಪ್ರಕಾಶ' ಪ್ರಕಟಿಸುತ್ತಿದೆ. ಆತ್ಮಘಾತವಾದ ಮನರಂಜನೆಯ ವಿಷಯಗಳನ್ನು ಪ್ರಕಟಿಸುತ್ತಾ ಜನತೆಯಲ್ಲಿ ಅಜ್ಞಾನವನ್ನು ಬೆಳೆಸುವುದು 'ವೇದಪ್ರಕಾಶ'ದ ಉದ್ದೇಶ್ಯವಲ್ಲ. ಪರಮಾತ್ಮನ ದಿವ್ಯವಾಣಿಯನ್ನು ಸೃಷ್ಟಿಯ ಆದಿಯಿಂದ ಜ್ಞಾನಿಗಳಾದ ಋಷಿಗಳು ಯಾವ ರೀತಿಯಿಂದ ಅರಿತುಕೊಂಡು ಅದನ್ನೆ ಸತ್ಯವೆಂದು ಹೇಳುತ್ತಾ ಬಂದಿರುವರೋ ಅಂತಹ ಸತ್ಯವನ್ನು ಪ್ರಕಟಿಸುವುದೇ ವೇದಪ್ರಕಾಶದ ಕರ್ತವ್ಯವಾಗಿದೆ. ಸಜ್ಜನರಾದ ವಾಚಕರು ಇವನ್ನು ಪೂರ್ಣವಾಗಿ ತಿಳಿದುಕೊಳ್ಳಬೇಕೆಂಬುದೇ ನಮ್ಮ ಸದಿಚ್ಛೆ.

---

## ಮಾನವ ಜೀವನ

● ಎ. ಶ್ರೀಪತಿ ಆಚಾರ್ಯ.

ಪ್ರಸಕ್ತ ಜಗತ್ತಿನ ವಿಭಿನ್ನ ಆಗುಹೋಗುಗಳಲ್ಲಿ ನಮ್ಮ ಬದುಕಿನ ಬೇರೆ ಬೇರೆ ಪದರಗಳನ್ನು ವಿಶ್ಲೇಷಿಸಿದರೆ ನಮಗೆ ದೊರೆಯುವ ವಾಸ್ತವ ಮುಖ ಯಾವುದು ಎಂದು ಅರೆಕ್ಷಣ ಯೋಚಿಸೋಣವೆ? ಆಗ ಒಂದೊಂದೇ ವಿಕಲ್ಪಗಳು ವಿಶದಗೊಳ್ಳುತ್ತಾ ಹೋಗುತ್ತವೆ. ಹೀಗೆ ಮಾಡುವಾಗ ಮನುಷ್ಯನ ವರ್ತನೆಗಳು ಇಂದು ಮಾನವನ ಜೀವನವನ್ನು ಎತ್ತರಿಸುವಲ್ಲಿ ಎಷ್ಟು ಸಹಾಯಕವಾಗಿವೆ ಎಂಬುದೂ ವಿವೇಚನಾರ್ಹ. ಮಾನವನ ಜೀವನವನ್ನು ಬಿಟ್ಟಂದದಲ್ಲಿ ಸ್ವಚ್ಛವಾಗಿರಿಸಿಟ್ಟಿದ್ದ ಅನೇಕಾನೇಕ ಮೌಲ್ಯಗಳು ಇಂದೇಕೆ ನಷ್ಟವಾಗಿವೆ ಎಂಬ ಪ್ರಶ್ನೆ ತಟ್ಟನೆ ಮೂಡಿ ಕ್ಷಿಪ್ರ ತಣ್ಣಗಾಗುತ್ತದೆ. ಆ ಮೌಲ್ಯಗಳು ಸವಕಲಾಗಲು ಕಾರಣರಾರು? ಜೀವನದಲ್ಲೊಂದು ಗುರಿಯಿದ್ದು ಸಾಗುತ್ತಿದ್ದ ಮಾನವ ಜೀವನವಿಂದು ಗುರಿಯಿಲ್ಲದೆ ಸುತ್ತುವ ಬುಗುರಿಯಂತಾದುದು ಹೇಗೆ?

ನಮ್ಮ ಜೀವನವಿಂದು ಎಷ್ಟು ಜಟಿಲವಾಗಿದೆ ಎಂದರೆ ಬದುಕಿನ ಯಾವ ಒಂದು ಚಟುವಟಿಕೆಯೂ ಪರಾಶ್ರಯ, ಯಂತ್ರ–ತಂತ್ರಗಳ ಆಶ್ರಯವಿಲ್ಲದೆ ಸಾಗುವುದು ದುಸ್ತರವಾಗಿದೆ. ಆದರೆ ಇಂಥ ಸಂಧಿಕಾಲದಲ್ಲಿ ಮಾನವನು ಪರರ ಕುರಿತು ಆದೆಷ್ಟು ಹಿತಾರ್ಥ ಮುತುವರ್ಜಿ ಉಳ್ಳವನಾಗಿ ಉಳಿದಿದ್ದಾನೆ? ಪರರ ಚಟುವಟಿಕೆಗಳಲ್ಲಿ ತಾನು ನೀಡುತ್ತಿರುವ

ಸಹಕಾರವೆಷ್ಟು? ತಾನು ತನ್ನ ಕಾರ್ಯದಲ್ಲಿ ಪರರಿಂದ ನಿರೀಕ್ಷಿಸುತ್ತಿರುವ ಪಡೆಯುತ್ತಿರುವ ಸಹಕಾರವೆಷ್ಟು?

ಯಂತ್ರ-ತಂತ್ರಗಳ ದಾಸಾನುದಾಸನಾಗಿ ಆಗೊಮ್ಮೆ ಈಗೊಮ್ಮೆ ಕೊನೆಗೊಮ್ಮೆ ಎಲ್ಲೆಲ್ಲೂ ಅಸಹಾಯಕನಾಗಿ ಉಳಿಯುವ ಸಂದರ್ಭಗಳೆಷ್ಟು? ಸತ್ವಪೂರ್ಣನೂ ಸರಳನೂ ಸಮಾಜಸೇವಾಜೀವಿಯೂ ಆಗಿರುವಂಥ ಮನುಷ್ಯನಿಂದು ಯಾರೆಲ್ಲರ 'ಪ್ರಯೋಗಪಶು'ವಾಗುತ್ತಿರುವುದನ್ನು ಸೂಕ್ಷ್ಮವಾಗಿ ಚಿಂತನೆ ನಡೆಸಬೇಕಾದ ತುರ್ತು ಇಂದು ನಿರ್ಮಾಣವಾಗಿಲ್ಲವೆ? 'ಹಿಂಡಿ'ನ ಅಪಕ್ವಮನೋಲಹರಿಯ ಪ್ರವಾಹದಲ್ಲಿ ಮಾನವಜೀವನವೇ ಕೊಚ್ಚಿಕೊಂಡೊಯ್ಯಲ್ಪಡುತ್ತಿರುವಾಗ ನಮ್ಮ ಚಿಂತನರಹಿತ ಮೌನ ಸಹ್ಯವಾದೀತೇ?

**ನಮ್ಮ ಜೀವನ :—**

ಇಂದು ನಮ್ಮ ಜೀವನಶೋಧಕಾರ್ಯ ಆಗಲೇಬೇಕಾಗಿದೆ. ಬದುಕಿನ ಒಂದೊಂದು ಸುಂದರಮುಖವೂ ಅರ್ಥಪೂರ್ಣಕ್ರಿಯೆಯೂ ವ್ಯಾಪಾರೀಕರಣ ಹೊಂದಿ, ಮಾನವ ಸಂಬಂಧಗಳೆಲ್ಲಾ ಕೃತಕ-ಕೃತ್ರಿಮ-ಶುಷ್ಕಗೊಂಡು, 'ಮಾನವತೆ' ಗೋಚರಿಸುವ ಬದಲು ಮೃಗೀಯ ವಿಲಾಸ ಸಂಭ್ರಮಗಳು ಇಂದಿನ 'ನಾಗರಿಕಜೀವನ'ವನ್ನು ಕುರುಡಾಗಿಸಿವೆ. ಆಧುನಿಕತೆಯ ಪೋಕಿಯಲ್ಲಿ ಸ್ವೇಚ್ಛಾಚಾರ, ಸ್ವೈರಾಚಾರ, ಭ್ರಷ್ಟಾಚಾರ, ಸ್ವಜನಪಕ್ಷಪಾತ ಇವೇ ಋಜುಮಾರ್ಗಗಳೇನೋ ಎನ್ನುವಂತೆ ಮೆರೆಯುತ್ತಿಲ್ಲವೆ? ವಿಭಿನ್ನ ಸೂಕ್ಷ್ಮ ಎಳೆಗಳ ಸಂಪರ್ಕದಿಂದ, ಜಟಿಲ ಜಗತ್ತಿನ ಜಂಜಡ ಜತನದಿಂದ—ಇಂದು ಮಾನವ ಜನಾಂಗವು ಇದರ ಬವಣೆಯನ್ನು ಅನುಭೋಗಿಸುತ್ತಿಲ್ಲವೆ? ಅದಾವುದೂ ನಮ್ಮನ್ನು ಮುಟ್ಟುತ್ತಿಲ್ಲವೆ, ತಟ್ಟುತ್ತಿಲ್ಲವೆ?

ಇಷ್ಟೆಲ್ಲ ನಡೆಯುತ್ತಿದ್ದಾಗ್ಯೂ, ಜೀವನದಲ್ಲಿ ಎಡವುತ್ತಿದ್ದಾಗ್ಯೂ, ನಮ್ಮ ಬದುಕಿನೆಲ್ಲ ಚಟುವಟಿಕೆಗಳು ಬರಿಯ ಪ್ರಚಾರಕ್ಕಾಗಿಯೋ, ಡಂಭಾಚಾರಕ್ಕೋ ಏಕೆ ಮೀಸಲು? ನಮ್ಮ ಒಂದೊಂದು ಪ್ರಕ್ರಿಯೆಯ ಹಿಂದೂ ಮುಂದೂ ಮುಖವಾಡಗಳೇ ಮೆರೆಯುವ ಅಸಹ್ಯ ದೃಶ್ಯ ನಮ್ಮ ಕಣ್ಮನ-ಹೃನ್ಮನಗಳಿಗೆ ತಟ್ಟಿದರೂ ಯಾವ ರೀತಿಯಲ್ಲೂ ಅವುಗಳಿಗೆ ಪ್ರತಿಕ್ರಿಯಿಸಲಾಗದ ಅಸಹಾಯಕತೆಯಲ್ಲಿ ಬದುಕು ಬರಡಾಗುತ್ತಿರುವುದನ್ನೂ ಬಚ್ಚಿಟ್ಟು ಕೂತಿರುವ ನಮ್ಮ ಸ್ಥಿತಿ ಶೋಚನೀಯ!

ನಮ್ಮೆಲ್ಲ ಮಾನವ ಸಂಬಂಧಗಳೆಡೆಯಲ್ಲಿ ಜೀವನವಿರೋಧಿಯಾದ ವ್ಯಾಪಾರೀ ಮನೋಭಾವವು ನುಸುಳಿಕೊಂಡು ಜೀವನದ ಬರ್ಬರತೆಯನ್ನು ಬೊಟ್ಟುಮಾಡಿ ತೋರಿದರೂ ನಾವು 'ಸ್ಥಿತಪ್ರಜ್ಞ'ರಂತೆ ಹೇಗಾದರೂ ಬದುಕುತ್ತಿರುವುದು ಅದೆಷ್ಟು ಮಾನವೀಯ! ಇಂಥವೇ ನಗ್ನವಿಚಾರಗಳ ಎದುರು ನಾವು 'ಮಾನವೀಯತೆ'ಯ ದೊಡ್ಡ ದೊಡ್ಡ ಮಾತುಗಳನ್ನು ಆಡುತ್ತಲೇ ಗೌಣಾಚರಣೆಯಲ್ಲಿ ಜೀವನ ನಡೆಸುವಂಥಾದುದು ಎಷ್ಟೊಂದು ಹಾಸ್ಯಾಸ್ಪದ!

**ಮನುಕುಲಕ್ಕೆ ರಕ್ಷಣೆ ನೀಡದ ಶಿಕ್ಷಣ :—**

ಮಾನವ ಜೀವನದ ಲೋಪದೋಷಗಳನ್ನು ನಾವಿಂದು ಅನುಭವಿಸಿಕೊಂಡಿದ್ದೇ ಸರಿಪಡಿಸಲಾರದವರಾಗಿದ್ದೇವೆ. ಶಿಕ್ಷಣ ವ್ಯವಸ್ಥೆಯು ವ್ಯಷ್ಟಿ-ಸಮಷ್ಟಿಯನ್ನು ಕಟ್ಟುವುದ

ಕ್ಕಾಗಿ. ಶಿಕ್ಷಣವು ಸಮಾಜದ ಅವಿಭಾಜ್ಯಕ್ರಿಯೆ. ಸಮಾಜದಲ್ಲಿರುವ ಮಾನವರಲ್ಲಿ ಆತ್ಮಸಂಯಮ, ಆತ್ಮನಿಗ್ರಹ ಶಕ್ತಿಯನ್ನು ಬೆಳೆಸುವುದೇ ಶಿಕ್ಷಣದ ಉದ್ದೇಶಗಳಲ್ಲಿ ಮೂಲ ತರವಾದದ್ದು. ಆದರೆ ಇಂದಿನ ಶಿಕ್ಷಣ ಪದ್ಧತಿಯು ಈ ಮೂಲೋದ್ದೇಶವನ್ನು ಪೂರೈಸುತ್ತಿದೆಯೆ? ಇಂಥ ಶಕ್ತಿಯನ್ನು ನಷ್ಟವಾಗಿಸುವತ್ತವೇ ಶಿಕ್ಷಣ ಗಮಿಸುತ್ತಿರುವುದು ವಿಷಾದನೀಯ!

ಮೌಲ್ಯಗಳನ್ನು, ಉದಾತ್ತಗುಣಗಳನ್ನು ಗ್ರಹಿಸಲಾರದ ನಮ್ಮ ಇಂದಿನ ಶಿಕ್ಷಣ ಪದ್ಧತಿಯು ಅಪಮೌಲ್ಯಗಳ ಅವಗುಣಗಳ ಪ್ರಾಧಾನ್ಯವನ್ನೇ ಹೆಚ್ಚಿಸುತ್ತಿದೆ. ಬರಿಯ ಮರೀಚಿಕೆಗಳಂಥ ಭೌತಿಕ ಪ್ರತಿಫಲಗಳನ್ನು ತೋರ್ಪಡಿಸಿ ವ್ಯಕ್ತಿವ್ಯಕ್ತಿಯನ್ನೂ ಮಾನಸಿಕ ಹಿಡಿತದಲ್ಲಿಟ್ಟುಕೊಳ್ಳುವಲ್ಲಿ ಶಿಕ್ಷಣವು ಯಶಸ್ವಿಯಾಗಿದೆ. ಇದರಿಂದಾಗಿ ದೂರಗಾಮಿ ಚಿಂತನೆಯೆಲ್ಲಾ ವಕ್ರಗೊಂಡು, ಅಧ್ಯಯನ-ಮನನ—ಆಚರಣ ಇಲ್ಲದ ಕುಯುಕ್ತಿ—ಕುತಂತ್ರದ ವಿಮರ್ಶೆಯೇ ಚಿಂತನ ಎಂದು ನಂಬಿಸುವ ಮಾಟ ವಿದ್ಯೆಯೇ ಶಿಕ್ಷಣವೇನೋ ಎಂದು ಸಮೀಕರಿಸುವಂತಾಗಿದೆ.

ಈ ಶಿಕ್ಷಣ ಕ್ರಮದಿಂದ ವ್ಯಕ್ತಿಯು ತನ್ನತನವನ್ನೂ, ದೇಶೀಯತನವನ್ನೂ ಕಳೆದುಕೊಳ್ಳುವಂತಾಗಿದೆ. ಆಕಸ್ಮಾತ್ ಯಾರಾದರೊಬ್ಬನಲ್ಲಿ ದೇಶೀಯತನ ಕಂಡು ಬಂದರೂ ಆತನನ್ನು ಅನ್ಯಾಸಕ್ತನನ್ನಾಗಿಸುವ ಪ್ರಖರ ಮನೋಭೂಮಿಕೆಯನ್ನು ಸೃಷ್ಟಿಸುವ ಕಾರ್ಯದಲ್ಲಿ ಪಾಶ್ಚಾತ್ಯ ಅನುಕರಣೆಯ ಈ ಶಿಕ್ಷಣ ಪದ್ಧತಿಯು ಸಾಫಲ್ಯ ಪಡೆದಿದೆ--ಎಂದು ಹೇಳದೆ ವಿಧಿಯಿಲ್ಲ. ಸಾಲದೆಂದರೆ, ಇಂದಿನ ಶಿಕ್ಷಣದಿಂದ ಆದರ—ಗೌರವದ ಭಾವಗಳು ಸುಳಿಯುವುದು ಕೂಡಾ ಅಸಾಧ್ಯವೂ ಅಸಾಧುವೂ ಎನಿಸಿದೆ. ಸುಳಿದರೂ ಅವು ಬರಿಯ ಡಾಂಭಿಕತನದ ಪ್ರದರ್ಶನವಾಗಿರುತ್ತದೆಯೇ ಹೊರತು ವಿಶ್ವಸನೀಯವಿರುವುದಿಲ್ಲ.

ಇಂದು ಶಿಕ್ಷಣವು ಅಪಮೌಲ್ಯ—ಅವಿಚಾರಗಳ ವರ್ಧನೆಗೆ ಪ್ರಬಲವಾಹಕವಾಗಿ ಸಹಕರಿಸುತ್ತಿದೆ. ಆಚಾರ—ವಿಚಾರಗಳನ್ನು ಸಾಕಷ್ಟು ಶಿಥಿಲಗೊಳಿಸುವ ಯೋಜಿತ ಸೂತ್ರದಂತೆ ಶಿಕ್ಷಣವು ಈ ಪದ್ಧತಿಯ ಮೂಲ ಪ್ರವರ್ತಕರಲ್ಲಿ ಸಾರ್ಥಕ್ಯದ ಭಾವವನ್ನು ಮೂಡಿಸುತ್ತಿದೆ. ಈ ಶಿಕ್ಷಣವೆಂಬ ಮಾಧ್ಯಮದ ಮೂಲಕ ದೇಶದ ಮತಿಯೇ ಭೇದಗೊಂಡು ಮತೀಯ ಭಾವನೆಗಳನ್ನೇ ಬೆಳೆಸುವ ಮತೀಯ ನೇತಾರರು, ಮಠಾಧಿಪತಿಗಳು, ದೇವಾಲಯಗಳ ಆಡಳಿತವಿರಿಸಿಕೊಂಡಿರುವ ಧರ್ಮದರ್ಶಿಗಳು, ಎಲ್ಲರೂ ಇಂಥ ವಿಷಮ ಶಿಕ್ಷಣ ಪದ್ಧತಿಯೇ ಆದರ್ಶ ಪದ್ಧತಿ ಎಂಬಂತೆ ಪ್ರೋತ್ಸಾಹಿಸುತ್ತಿರುವುದು ಭಾರತೀಯ ಜನಾಂಗಕ್ಕೆ ಆತ್ಮಘಾತಕ ಕ್ರಿಯೆ.

ಪಾಶ್ಚಾತ್ಯ ಆಕ್ರಮಣಕಾರರು ಕುಹುಕತನದಿಂದ ಈ ನೆಲದಲ್ಲಿ ಬಿತ್ತಿದ ಶಿಕ್ಷಣ ಪದ್ಧತಿಯು ರಾಜಕಾರಣಿಗಳ ಒಡೆದು ಆಳುವ ಕುಟಿಲ ನೀತಿಗೆ ಸಂವಹನ—ಸಂಚಾಲನವನ್ನು ಪುಷ್ಕಳವಾಗಿ ನೀಡಿದೆ. ಇಂಥ ಒಂದು ದುರ್ದೆಶೆಯಲ್ಲಿ ಮಾನವತೆಯು ಮಾನಸಿಕ ಸ್ಥೈರ್ಯವನ್ನೇ ಕಳೆದುಕೊಂಡು ಮರುಗುವ ದುರವಸ್ಥೆಯು ಎಲ್ಲರಿಗೂ ಮನವರಿಕೆಯಾಗುತ್ತಿದ್ದರೂ ವ್ಯಷ್ಟಿ—ವ್ಯಷ್ಟಿಯೂ ಸ್ಥಿತಪ್ರಜ್ಞೆಯಲ್ಲಿಯೇ ಇರುವಂತೆ ತೋರ್ಪಡಿಸುತ್ತಾ ಸಮಷ್ಟಿಯ ಅಧಃಪತನಕ್ಕೆ ಇಂಬುಗೊಡುತ್ತಿರುವುದು ಶೋಚನೀಯವಲ್ಲವೇ? ಇದು ಜನಾಂಗವೇ ಆತ್ಮಸಂಯಮ, ಆತ್ಮ ವಿಶ್ವಾಸ ಕಳೆದುಕೊಂಡು ತತ್ತರಿಸುವ ವಿದ್ಯಮಾನವಲ್ಲವೇ? ಮತ್ತೊಮ್ಮೆ

ಆತ್ಮವಿಶ್ವಾಸ ತುಂಬುವ ಶಿಕ್ಷಣ ಪದ್ಧತಿಯು ಎಂದು ಹೇಗೆ ರೂಢವಾದೀತೆಂಬುದು ಕಾಲ ಗರ್ಭದಲ್ಲಿರುವ ನಿಗೂಢ ರಹಸ್ಯ. ಭಾರತೀಯ ಪರಂಪರೆಯ ಶಿಕ್ಷಣ ಪ್ರಣಾಲಿಯನ್ನು ಮತೀಯ ನಾಯಕರಾದರೂ ಏಕೆ ಅಳವಡಿಸುತ್ತಿಲ್ಲವೆಂಬುದು ಗಾಢ ಪ್ರಶ್ನೆ.

ಇನ್ನೂ ಒಂದು ಮಾತು. ಇಂದಿನ ಕಿರಿಯರು ಹಿರಿಯರಿಗೆ ಗೌರವ ತೋರುತ್ತಿಲ್ಲ ಎಂಬ ಆಕ್ಷೇಪವಿದೆ. ಆದರೆ ಅಂಥ ಸತ್ಸಂಸ್ಕೃತಿಯನ್ನು ನೀಡುವ ಶಿಕ್ಷಣ ಕ್ರಮವಿಂದು ಇದೆಯೆ? ಅಪರೋಕ್ಷವಾಗಿ ಹಿರಿಯರನ್ನು ಗೌರವಿಸದಿರುವುದಕ್ಕೆ ಪ್ರೇರಣೆಯೇ ಇಂದಿನ ಶಿಕ್ಷಣ ಪದ್ಧತಿ! ಮೇಲ್ನೋಟಕ್ಕೆ ಗೌರವ ತೋರಿದಂತೆ ಮಾಡಿ ಬೆನ್ನ ಹಿಂದೆ ಹಿರಿಯರನ್ನು ನಿರ್ಲಕ್ಷಿಸುವ ಕಿರಿಯರಿಗೆ ನಿಜವಾದ ಆದರ್ಶ ಯಾರು ಎಂಬ ಪ್ರಶ್ನೆಗೆ ಉತ್ತರವನ್ನು ಶಿಕ್ಷಣ ದಲ್ಲಿ ತೊಡಗಿರುವ ಹಿರಿಯರು ಕೆಲವರ ಮುಖವಾಡಗಳ ಆಷಾಢಭೂತಿತನದ ಸೂಕ್ಷ್ಮ ಎಳೆ ಗಳಲ್ಲಿ ಕಂಡುಕೊಳ್ಳಬಹುದಾಗಿದೆ. ಅಂದರೆ, ಶಿಕ್ಷಣದಲ್ಲಿ ಮೆರೆಯುವ ಡಾಂಭಿಕತನದ ಮುಖ ವಾಡ ಕಳಚೀತು. ಇಂಥ ಶಿಕ್ಷಣವು ಮಾನವ ಸಂತಾನಕ್ಕೆ ರಕ್ಷಣೆ ನೀಡೀತೇ ಎಂಬುದು ವಿವೇಚನಾರ್ಹ.

**ವ್ಯಾಪಾರೀಕರಣದ ಜಾಲ:**

ನಮ್ಮ ಇಂದಿನ ವ್ಯಸ್ತಪರಂಪರೆಗೆ ಶಿಕ್ಷಣವೊಂದೇ ಕಾರಣವಲ್ಲವೆಂದು ವಾದಿಸು ವವರಿರಬಹುದು. ಶಿಕ್ಷಣವು ಸಮಾಜದ ಸತ್ಸಂಸ್ಕಾರಗಳಿಗೆ ಮೂಲಭೂತ ಪ್ರೇರಣೆ ಎಂದರೆ ತಕ್ಷಣ ನಿರಾಕರಿಸುವಂತಿಲ್ಲ. ಅಂತೆಯೇ ಇತರ ಅನೇಕ ಕಾರಣಗಳಿಂದಲೂ ವ್ಯಸ್ತಪರಂಪರೆ ಮತ್ತೂ ಅವ್ಯವಸ್ತಗೊಳ್ಳುತ್ತಿರುವುದನ್ನು ಕಡೆಗಣಿಸತಕ್ಕದಲ್ಲ.

ನಮ್ಮ ಜೀವನವೇ ಇಂದು ವ್ಯಾಪಾರೀಕರಣದ ಜಾಲದಲ್ಲಿ ಸಿಲುಕಿದೆ. ನಡೆ–ನುಡಿ ಎರಡೂ ಶುಷ್ಕಗೊಂಡು ವಾಪಾರೀಕೃತ ಪ್ರತಿಫಲಗಳನ್ನು ನಿರೀಕ್ಷಿಸುತ್ತಲೇ ಇರುತ್ತವೆ. ಇಂಥ ನಡೆವಳಿ ಪುಷ್ಕಳವಾಗಿರುವ ಬದುಕಿನಿಂದ ನಿದರ್ಶನವೊಂದನ್ನು ಎತ್ತಿ ತೋರಿಸಬೇಕಾದ್ದು ಅನವಶ್ಯ.

ಸೂರ್ಯಮುಳುಗದ ಸಾಮ್ರಾಜ್ಯ ಜಗತ್ತಿನಲ್ಲಿ ಕಟ್ಟಲ್ಪಟ್ಟದ್ದೇ ಈ ವ್ಯಾಪಾರಧರ್ಮದಲ್ಲಿ. ಪಾಶ್ಚಾತ್ಯ ಆಕ್ರಮಣಕಾರರು ನಮ್ಮ ದೇಶದಲ್ಲಿ ಕಾಲಿಡಲು ಹಾಕಿಕೊಂಡ ವೇಷವೇ ವ್ಯಾಪಾರ. ಆದರೆ ಅವರ ಹಿಂದಿದ್ದ ಆವೇಶ ಆಗಲೂ ನಮಗರ್ಥವಾಗಿಲ್ಲ; ಈಗಲೂ ಅರಿವಾ ಗುತ್ತಿಲ್ಲ; ಅರಿವಾದರೂ ಆ ಅರಿವನ್ನು ನೆಚ್ಚಿಕೊಳ್ಳಲು ನಮ್ಮ ವ್ಯಾಪಾರೀಕೃತ ಬದುಕು ಬಿಡುತ್ತಿಲ್ಲ. ಇಂದಿಗೂ ಈ ವ್ಯಾಪಾರ ಎಂಬ ಸಾಧನವೇ ಜಗತ್ತಿನ ಸಾರ್ವಭೌಮತ್ವವನ್ನು ಪಡೆದಿದೆ ಎಂದರೂ ಅತಿಶಯೋಕ್ತಿ ಇಲ್ಲ. ಹೀಗಿರುವಾಗ ಮಾನವೀಯ ಸಂಬಂಧಗಳೂ ಇಂದು ದಟ್ಟವಾಗಿ ವ್ಯಾಪಾರೀಕೃತಗೊಂಡಿರುವಲ್ಲಿ ಅಚ್ಚರಿ ಇಲ್ಲ. ಆದರೆ ಇದರಿಂದ ಬವಣೆಪಡುವ ಉರುಳು ಮಾತ್ರ ತಪ್ಪಿದ್ದಲ್ಲ.

ಇಂದು ನಮ್ಮೆಲ್ಲರ ಶ್ರಮ—ಸುಲಭಸಂಪಾದನೆಗೆ, ಸಂಪತ್ತಿನ ಶೇಖರಣೆಗೆ; ಅದೂ, ಸಾಧ್ಯವಾದಷ್ಟು ವಾಮಾತಿವಾಮಮಾರ್ಗದಲ್ಲಿ! ಶ್ರಮ ಜೀವನ ನಷ್ಟವಾಗಿರುವುದು ಮಾತ್ರವಲ್ಲ ದೈಹಿಕಶ್ರಮವೆಂಬುದು ಇಂದು ಮುಖ ಕಳಕೊಂಡಿದ್ದು ಅದು 'ಅನಾಗರಿಕತೆ'ಯ ಕುರುಹಾಗಿ

ಕಾಣಲ್ಪಡುತ್ತಿದೆ. ವ್ಯಾಪಾರೀಕರಣದ ಈ ಜಾಲದಲ್ಲಿ ಸುಲಭಮಾರ್ಗಗಳೇ ಜೀವನದಲ್ಲಿ ಆಕರ್ಷಕವಾಗಿರುವುದು ಅಕಾರಣವಲ್ಲ. ಈ ಜಾಲದಲ್ಲಿ ಮೌಲ್ಯಗಳು ತಮ್ಮ ಮೂಲವನ್ನೇ ಕಳಕೊಂಡಿವೆ. ಅನ್ಯಾಯ–ವಂಚನೆಗಳೇ ಜೀವನದ ಏಕಾಂಗವಾಗಿ, ಬದುಕು ಶುಷ್ಕವಾಗಿವೆ. ಮತ್ತೆ ಅದೇ ಪ್ರಪಾತಕ್ಕೆ ಧುಮುಕಲು ಎಲ್ಲರೂ ಸಿದ್ಧರಾಗುತ್ತಿದ್ದಾರೆ. 'ಬದುಕುವ ದಾರಿ' ಎಂದು ಪಟ್ಟಹಾಕಿಕೊಂಡು ನಾವೆಂಥ ಮಾನವಜನಾಂಗವನ್ನು ಕಟ್ಟುತ್ತಿದ್ದೇವೆ! ನಮ್ಮ ಪೀಳಿಗೆಗೆ ನಾವೆಂಥ ನಡೆವಳಿಗಳನ್ನು ಬಳುವಳಿಯಾಗಿ ಬಿಟ್ಟು ಹೋಗುತ್ತಿದ್ದೇವೆ! ಇಷ್ಟನ್ನು ಯೋಚಿಸಲಿಕ್ಕಾದರೂ ಈ ಗಡಿಬಿಡಿಯ ಬದುಕಿನಲ್ಲಿ ಒಂದು ಕ್ಷಣ ಬಿಡುವನ್ನು ಪಡೆಯಬೇಕಲ್ಲವೆ?!

ಈ ವ್ಯಾಪಾರೀಕರಣದ ಜಾಲದಲ್ಲಿ ಸಿಲುಕಿರುವ ನಾವು ಸ್ವಪ್ರಭೇದದ ಜೀವಿಗಳನ್ನೇನಾದರೂ ಹಸಿಯಾಗಿ ತಿನ್ನುತ್ತಿಲ್ಲವಷ್ಟೆ! ಒಮ್ಮೆ ಯೋಚಿಸೋಣ. ಸಮಸ್ಯೆಯ ಮೂಲವನ್ನು ಅರಿಯಲಾಗದ, ಅರಿತರೂ ಪರಿಹರಿಸಲಾಗದ ಸಂಕೀರ್ಣ ಪರಿಸ್ಥಿತಿಯಲ್ಲಿ ಮಾನವತೆಯ ಹಾಡುಹಬ್ಬವಾಚರಿಸುವ ನಾವು ಹಾಡುಹಗಲೇ ಮೃಗೀಯತೆಯತ್ತ ವಾಲುತ್ತಿಲ್ಲವಷ್ಟೆ! ಜೈವಿಕವಾಗಿ ನಾವು ವಿಕಾಸದ ಏಣಿ ಏರುತ್ತಿದ್ದೇವೆಯೋ? ಅಜೈವಿಕ ವಿಕಾಸಕ್ಕಾದರೂ ನಾವು ಅಡ್ಡಿಯಾಗುತ್ತಿಲ್ಲವೆ? ಇದು ವಾಸ್ತವವೆಂದಾದಲ್ಲಿ ಎಂಥ ದುರಂತಮಯ ಗಮನ ನಮ್ಮದು!

**ಪ್ರಚಾರದಲ್ಲಿ ಮುಳುಗಿದ ಮಾನವಾಚಾರ:–**

ಈ ವ್ಯಾಪಾರದ ವೈಗಳ ಸಂಗಾತಿ ಪ್ರಚಾರ. ಜೀವನದಲ್ಲಿ ಬೇರೂರಿಕೊಂಡಿರುವ ವ್ಯಾಪಾರವು ಪ್ರಚಾರ ಮಾಧ್ಯಮವನ್ನು ಚೆನ್ನಾಗಿ ದುಡಿಸುತ್ತಿರುವುದು ಮಾತ್ರವಲ್ಲ, ತಾನೂ ಹುಲುಸಾಗಿದೆ. ಇದರಿಂದಾಗಿ ಇಂದು ಎಲ್ಲಕ್ಕೂ ಪ್ರಚಾರ ಪ್ರಾಮುಖ್ಯವೆನಿಸಿದೆ. ಜತೆಗೆ, ಆಡಂಬರ ಡಂಭಾಚಾರಗಳಿಗೇ ಆದ್ಯತೆ ಹೆಚ್ಚಿದ್ದು ಸ್ವಾಭಾವಿಕ. ಪ್ರಚಾರ–ಆಚಾರಗಳು ಜತೆಯಾಗಿ ಸಾಗುವಂಥವಲ್ಲ. ಇಂದು ಇವೆರಡೂ ಧ್ರುವೀಕರಣಗೊಂಡು ಇರುವುದನ್ನು ನಾವು ಹಂತ ಹಂತಗಳಲ್ಲೂ ಗಮನಿಸಬಹುದು. ಆಚಾರವಿದ್ದಲ್ಲಿ ಅಂಥವುಗಳಿಗೆ ಪ್ರಚಾರವಿರುವುದಿಲ್ಲ; ಪ್ರಚಾರವಿದ್ದಲ್ಲಿ ಆಚಾರಕ್ಕೆ ಸಂಚಕಾರವೆಂಬುದೂ ಖಚಿತ.

ಪ್ರಚಾರವು ಸಕ್ರಿಯವಾದಷ್ಟೂ ಆಚಾರ ಮೂಕವಾಗುತ್ತಾ ಸಾಗಿದೆ. ಪರಿಣಾಮವೇನಾಯಿತು? ಪ್ರಚಾರವು ತನ್ನ ಸುದೀರ್ಘ ಸ್ಪರ್ಶ ತಂತುಗಳನ್ನು ಜೀವನದ ಎಲ್ಲ ರಂಗ–ಕ್ಷೇತ್ರಗಳಿಗೂ ಚಾಚಿದೆ; ಆ ಎಲ್ಲ ರಂಗಗಳಿಂದಲೂ ಆಚಾರವನ್ನು ಬಾಚಿಕೊಂಡು ತಿಪ್ಪೆಗೆಸೆದಿದೆ. ಪ್ರಚಾರವೇ ಜಾಯಮಾನವಾಗುಳ್ಳ ಪಾಶ್ಚಾತ್ಯರಿಗೆ ಧರ್ಮವಾದರೂ ಇವೇ ಸ್ಪರ್ಶ ತಂತುಗಳಿಂದ ಜನಕೋಟಿಯನ್ನು ತಲುಪಬೇಕಿತ್ತು; ಇದರಂತೆ, ಇದೇ ಅನುಕರಣೆಯಂತೆ, ಧರ್ಮಪ್ರಚಾರವೂ ಬಲಿತೆಗೆದಿದೆ ಈ ನೆಲದ ವಾಸನೆಯನ್ನು. ಆಚಾರವೇ ಪ್ರಧಾನವಾಗಿದ್ದ ಈ ನೆಲದ ಧರ್ಮಬುದ್ಧಿಯು ಪ್ರಚಾರವಿಲ್ಲದೆ ಆದರ್ಶ ಆಚಾರ ಮಾತ್ರದಿಂದಲೇ ಜನಕೋಟಿಯನ್ನು ಆಕರ್ಷಿಸುವಲ್ಲಿ ಸಶಕ್ತವಾಗಿತ್ತು ಅಂದೊಮ್ಮೆ. ಆದರೆ ಆಚಾರ ಉಳಿದಿದೆ ಎಂಬ ಅನಿಸಿಕೆ ಹುಟ್ಟುವಲ್ಲೂ ಆಷಾಢಭೂತಿತನ ಒಳಪದರದಲ್ಲಿ ಅವಿತಿರುವುದು ಪಾರದರ್ಶಕವಾಗುತ್ತಿದೆ. ಹೀಗೆ ವ್ಯಾಪಾರ–ಪ್ರಚಾರದ ಸುಳಿಯಲ್ಲಿ ಧರ್ಮವು ಸಿಕ್ಕಿಕೊಂಡು ಡಂಭಾಚಾರವಷ್ಟೇ ಉಳಿಯುವಂತಾದುದು ದುರಂತವಲ್ಲದೆ ಮತ್ತೇನು?

ಸಮಷ್ಟಿ ಹಿತದ ಸತ್ಫಲಗಳು ಸದಾಚಾರಗಳು ತಮ್ಮ ಆಕರ್ಷಣೀಯತೆಯಿಂದ ಪ್ರಚುರಗೊಳ್ಳುವುದು ಒಳ್ಳೆಯದೇ. ಆದರೆ ಇವು ಬಾಹ್ಯಪ್ರೇರಿತ ಪ್ರಚಾರವನ್ನು ಬೇಡಲಾರವು; ಬೇಡಿದರೂ ಅದು ಅಪೂರ್ವ ಮಾತ್ರವಲ್ಲ ಅಕ್ಷಮ್ಯ ಕೂಡಾ. ಹೀಗಾಗಿ ಸಾರ್ವತ್ರಿಕವಾಗಿರುವ ಪ್ರಚಾರಗಳು ಸಮಷ್ಟಿ ಹಿತಾರ್ಥವಾಗಿರುವುದು ಸುದೂರವೇ ಸರಿ. ಅಂದರೆ ಪ್ರಚಾರವು ಬಗೆಬಗೆಯ ಬೇಗಡೆ ಅವಿಷಗಳಿಗೆ ಸೂಕ್ತ ಮಾಧ್ಯಮ ಎನಿಸಿದೆ. ವಂಚನೆ—ಮೋಸಗಳನ್ನು ಅಡಗಿಸಿಡುವಲ್ಲೂ ಈ ಪ್ರಚಾರ ಮಾಧ್ಯಮ ಪರಿಣಾಮಕಾರಿ ಎನಿಸಿ ಮಾನವತೆಯ ಮೋಡಿಯಲ್ಲಿ ಜಾಲ ಬೀರುವ ಮಾಟವಿದ್ಯೆಯಂತೆ ಕೆಲಸ ಮಾಡುತ್ತಿದೆ.

ವ್ಯಷ್ಟಿ-ವ್ಯಷ್ಟಿಯ ಸ್ವಾರ್ಥಸಂವರ್ಧನೆಗೆ ನೆರವಾದ ಪ್ರಚಾರವು ಸಮಷ್ಟಿಹಿತದ ಆಚಾರಗಳನ್ನು ಆಕಾಶದೆತ್ತರಕ್ಕೆ ಏರಿಸಿಟ್ಟು ಅವು ನೆಲತಲುಪದಂತೆ ಮಾಡಿದೆ ಎಂದರೆ ಅತಿಶಯೋಕ್ತಿಯಾದೀತೆ? ಇಂತಹ ಪ್ರಕ್ರಿಯೆಗಳು ನಮ್ಮ ಬದುಕಿನಲ್ಲಿ ಕಂಡ ಕಂಡಲ್ಲಿ ಕಾಲ್ತೊಡಕನ್ನು ನಿರ್ಮಿಸುತ್ತಿದ್ದರೂ ನಾವು ಬರಿಯ ಆಡಂಬರಕ್ಕೆ ಪ್ರಚಾರಕ್ಕೆ ನಮ್ಮನ್ನು ಮಾರಿಕೊಂಡು ಬವಣೆಪಡುತ್ತಿರುವುದು ಖೇದದ ಸಂಗತಿ. ಈ ಸೂಕ್ಷ್ಮ ಎಳೆಗಳ ಬಲೆಯಲ್ಲಿ ಸಿಲುಕಿಕೊಂಡಿರುವ ಮಾನವ ಜೀವಿಗಳಾದ ನಾವು ಇಂದು ಬೆಸ್ತನ ಬಲೆಯಲ್ಲಿ ಸಿಕ್ಕಿಕೊಂಡಿರುವ ಮೀನುಗಳಂತಾಗಿಲ್ಲವೆ? 'ಪ್ರಯೋಗ ಪಶು'ಗಳಾಗಿಲ್ಲವೆ? ಹಲಕೆಲವರ 'ಆಹಾರ ಜೀವಿ'ಗಳಾಗಿಲ್ಲವೆ? ಮಾನವತೆಯಲ್ಲಿ ಅಭಿಮಾನವುಳ್ಳವರು ಇಂಥ ಸೂಕ್ಷ್ಮ ವಿಚಾರಗಳನ್ನು ವಿವೇಚಿಸಿ ಸೂಕ್ತ ಪರಿಹಾರವನ್ನು ಕಂಡುಕೊಳ್ಳಬೇಕಾಗಿರುವುದು ಅತ್ಯಂತ ತುರ್ತಿನ ಸಂಗತಿ.

ಮಾನವತೆಯ ಹೆಸರು—ಸೋಗುಗಳಲ್ಲಿ ಮಾನವನನ್ನು ಸೂರೆಗೈಯ್ಯುವ ಏನೆಲ್ಲ ಪ್ರಕ್ರಿಯೆಗಳಿವೆಯೋ ಅವೆಲ್ಲಕ್ಕೂ ಇಂದು ಹೇರಳ ಪ್ರಚಾರ ಸಿಗುತ್ತಿದೆ. ಮಾನವೀಯತೆಯನ್ನು ಎತ್ತರಿಸುವ, ಪೋಷಿಸುವ ದಿನದಿನದ ಚಟುವಟಿಕೆಯೂ ವಿರಳವಾಗುತ್ತಿರುವ ಇಂದಿನ ವಿದ್ಯಮಾನದಲ್ಲಿ ಇಂಥವು ಇದ್ದರೂ ಅವುಗಳನ್ನು ಪ್ರಚಾರವು ಮರೆಮಾಚುವ ಸಂದರ್ಭಗಳೂ ಹೇರಳವಾಗುತ್ತಿರುವುದನ್ನು ನಾವು ಗಮನಿಸಿದರೂ ಆ ಬಗ್ಗೆ ಮೌನವಾಗಿ ಕೂತಿರುವುದು ಹೇಗೆ ಮಾನವೀಯವೆನಿಸೀತೋ ಅರ್ಥವಾಗುತ್ತಿಲ್ಲ. ಗಮನಿಸಿದರೂ ಒಳಗೊಳಗೆ ಗೊಣಗಿಕೊಂಡು ಮತ್ತೆ ಅದೇ ವಿಷವರ್ತುಲದ ಜಾಳದಲ್ಲಿ ನಾವು ಸೆಳೆಯಲ್ಪಟ್ಟು ಪತಂಗಗಳಂತೆ ಬೀಳುವುದು ಆಕಸ್ಮಿಕವೆ? ಆತ್ಮಘಾತಕವಲ್ಲವೆ?

### ಜ್ಞಾನರಹಿತವಾದ ವಿಜ್ಞಾನ ವಿಕ್ಷಿಪ್ತ:

ಇಷ್ಟಾಗ್ಯೂ ಇವಾವುದೂ ನಮ್ಮ ಜೀವನದ ವ್ಯಸ್ತಸ್ಥಿತಿಗೆ ಕಾರಣವಲ್ಲವೆಂದು ವಾದಿಸುವವರುಂಟು. ವಿಜ್ಞಾನವು ನಮ್ಮ ಅನೇಕ ಸಮಸ್ಯೆಗಳಿಗೆ ಪರಿಹಾರವನ್ನು ತಂದಿದೆ ಎನ್ನುವವರುಂಟು. ಆದರೆ ಇದು ಬರಿಯ ಏಕಪಕ್ಷೀಯ ನಿರ್ಣಯವಾದೀತು. ವಿಜ್ಞಾನವು ಕೆಲವೊಂದು ಸವಲತ್ತುಗಳನ್ನು ಮಾನವನಿಗೆ ನೀಡಿರುವುದು ನಿಜವಾದರೂ ಇನ್ನೊಂಡೆಡೆ ಮಾನವೀಯತೆಯನ್ನು ಮೂಕವಾಗಿಸುವ ಕಸರತ್ತು ಆಡಿರುವುದನ್ನು ನಿರ್ಲಕ್ಷಿಸುವಂತಿಲ್ಲ.

ಇಪ್ಪತ್ತನೆಯ ಶತಮಾನದಲ್ಲಿ ವಿಜ್ಞಾನವು ತಾನು ಪ್ರಾರಂಭದಲ್ಲಿರಿಸಿಕೊಂಡಿದ್ದ ಧ್ಯೇಯಾದರ್ಶಗಳಿಗೆ ಸಂಪೂರ್ಣ ತಿಲಾಂಜಲಿ ಇತ್ತಿದೆ ಎನ್ನಬೇಕಾಗಿದೆ. ವಿಜ್ಞಾನಕ್ಕೆ ದೂರಗಾಮೀದೃಷ್ಟಿ ನಷ್ಟವಾಗಿದೆ; ವಿಶ್ವಶ್ರದ್ಧೆಯಾಗಿದ್ದುದು ಪಾರ್ಶ್ವಪೀಡಿತವಾಗಿದೆ; ಸಮಸ್ತ

ಮನುಕುಲದ ಭವಿಷ್ಯದ ಕಲ್ಪನೆ ವಿಜ್ಞಾನಕ್ಕೆ ಇಲ್ಲವೆನ್ನದೆ ವಿಧಿಯಿಲ್ಲ. ಇದು ಅನೇಕ ಮಹಾನ್ ವಿಜ್ಞಾನಿಗಳೂ ಒಪ್ಪಿಕೊಳ್ಳುವಂಥ ಮಾತು. ವಿಶ್ವಶ್ರದ್ಧೆ, ಸತ್ಯಾನ್ವೇಷಣೆ ಇಲ್ಲದೆ, ಸಂಶೋಧನೆಗಳಲ್ಲಿ ತೊಡಗಿರುವ ವಿಜ್ಞಾನಿಗಳ ಬರಿಯ ವ್ಯಕ್ತಿಪ್ರತಿಷ್ಠೆ ಬೆಳೆಸುವಲ್ಲಷ್ಟೇ ಸಹಕರಿಸುತ್ತಿರುವ ವಿಜ್ಞಾನ ವಿಕ್ಷಿಪ್ತ; ಮಾತ್ರವಲ್ಲ, ಜ್ಞಾನರಹಿತ!

ಅಂತಿಮ ಸತ್ಯಗಳಿಗಾಗಿ ಕಾಯದೆ ದಿನದಿನದ ಅರೆಬೆಂದ ಸತ್ಯಗಳನ್ನು ಮಾತ್ರವೇ ಕಂಡುಕೊಂಡು ಅವುಗಳ ಇನ್ನಿತರ ಪೂರ್ವಾಪರ ಮುಖಗಳನ್ನು ತಿಳಿದುಕೊಳ್ಳದೆ ತಮ್ಮ ತಮ್ಮ ಸ್ಥಾನಭದ್ರತೆಗಾಗಿ ಅವುಗಳನ್ನು ಜನಾಂಗಕ್ಕೆ ಬಡಿಸುತ್ತಾ ಪ್ರಕೃತಿಯನ್ನು ಆಗಲೇ ಗೆದ್ದೆವೆಂದು ನಟಿಸುತ್ತಾ ಮಾನವರ ಸ್ವೇಚ್ಛಾಚಾರಕ್ಕೆ, 'ಸ್ವಯಂಭೂ' ಮನಸ್ಸಿನ ವಿಕಾಸಕ್ಕೆ ಎಡೆಕೊಡುವ ವಿಜ್ಞಾನವು ಮಾನವತೆಯನ್ನು ಮೇಲೆತ್ತುವುದೆಂದು ಹೇಗೆ ಆಶಿಸೋಣ? ಭುವನದೊಳಗಿನ ಸ್ವಯಂಭೂ ಮನುಕುಲವು ಇದನ್ನೇ ಪೋಷಿಸಿ ಬವಣೆ ಪಡುತ್ತಿರುವ ಈ ದೃಶ್ಯ ಭವ್ಯವೆನಿಸುವುದೆ?

ವಿಜ್ಞಾನದಲ್ಲಿ ಇಂದು ಮೊದಲಿದ್ದ ಶುದ್ಧ ಕಾರ್ಯ-ಕಾರಣ ಸಂಬಂಧ ಕಡಿದುಹೋಗಿ ಇದರ ಮಾರ್ಗ ವಕ್ರಗೊಂಡಿದೆ. ತಥ್ಯ-ಪಥ್ಯವಾಗದ (ಅ)ಸತ್ಯಗಳನ್ನು ಹಾಸ್ಯಾಸ್ಪದವಾದ ರೀತಿಯಲ್ಲಿ ಹೊರಗೆಡಹುತ್ತಾ ನಾಳೆಗಳಲ್ಲಿ ಈ ಸತ್ಯಗಳನ್ನು ಇದೇ ವಿಜ್ಞಾನವು ಗೇಲಿ ಮಾಡುವಾಗ ಮನುಕುಲವು ಅಜ್ಞಾನದಲ್ಲಿ ತೇಲಿಹೋಗುತ್ತಿರುವ ದೃಶ್ಯ ನಿಜಕ್ಕೂ ಖೇದಪೂರ್ಣ. ಪ್ರಕೃತಿ ಧರ್ಮದ ಹಿಡಿತದಲ್ಲಿರಬಲ್ಲ ಭಾರತೀಯರು ಈ ಪ್ರವಾಹದಲ್ಲಿ ಕೊಚ್ಚಿಹೋಗದಂತೆ ಜಾಗ್ರತೆ ವಹಿಸಬೇಕಾದ ಕಾಲ ಸನ್ನಿಹಿತ!

ವಿಜ್ಞಾನದ ಬಗ್ಗೆ ವಿಜ್ಞಾನಿಗಳಿಗೂ ಅನಿಶ್ಚಿತತೆ ತುಂಬಿಕೊಂಡಿದೆ. ವೈಜ್ಞಾನಿಕ ಸಂಶೋಧನೆಗಳನ್ನು ನೋಡಿದರೆ ಈ ಶಾಸ್ತ್ರವು ಸಾಮಾನ್ಯ ಮನುಷ್ಯರಿಗಾಗಿ ಅಲ್ಲವೆಂಬ ವಿಚಾರ ಹೆಚ್ಚು ಹೆಚ್ಚು ಸ್ಪಷ್ಟವಾಗುತ್ತಿದೆ. ಮಾನವ ಜನಾಂಗವಿಂದು ಸಂದೇಹ ಸಾಮ್ರಾಜ್ಯದಲ್ಲಿ ತೇಲಾಡುತ್ತಿರುವ ಜೀವಶಾಸ್ತ್ರದ ವಿಕಸಿತ ಪ್ರಭೇದ ಮಾತ್ರ! ಇದಕ್ಕೆ ಕಾರಣವೆಂದರೆ ವಿಜ್ಞಾನದ ವಿಶ್ವಶ್ರದ್ಧೆ ಸತ್ಯಶ್ರದ್ಧೆ ಪಾರ್ಶ್ವಪೀಡೆಗೆ ಒಳಗಾದ್ದು! ಪರಿಣಾಮದಲ್ಲಿ ಕಂಡರೆ ವಿಜ್ಞಾನವು ಸಂಪಾದಿಸಿದ ಜ್ಞಾನರಹಿತವಾದ ಶಕ್ತಿ ಇಂದು ಮಾನವ ತಲೆಯೊಂದಕ್ಕೆ ಮೂರು ಟನ್ನಿನಷ್ಟು ವಿನಾಶಕಾರಿ ಸ್ಫೋಟಕ ಶಕ್ತಿ! ಈ ಶಕ್ತಿ ವಿಜ್ಞಾನಿಗಳ ಹತೋಟಿಯಲ್ಲೂ ಉಳಿಯದಿರುವುದು ಜನಾಂಗದ ದುರಂತವಲ್ಲವೆ?

ಈ ಸಂಧಿಯಲ್ಲಿ ವಿಜ್ಞಾನವನ್ನೇ ವಿಶಿಷ್ಟವಾಗಿ ನಂಬಿರುವ ಮಾನವನೂ ವಿಕ್ಷಿಪ್ತವಾಗದಿರುವುದು ಹೇಗೆ? ಯಾವೊಂದು ನಂಬಿಕೆಗಳಿಗೂ ಇಂಬುಗೊಡದೆ, ಬರಿಯ ಡಂಬಾಚಾರದ ನಟನೆಯಲ್ಲಿ ಬದುಕುವ ಮಾನವನು ವ್ಯಾಪಾರ-ಪ್ರಚಾರದಲ್ಲಿಯೇ ಮುಕ್ತಿ ಕಾಣುತ್ತಿರುವ ವಿಷಮಸ್ಥಿತಿ ನಮ್ಮ ಎದುರು ಇದೆ. ಪ್ರಕೃತಿ ಧರ್ಮದ ಕೊಂಡಿ ತಪ್ಪಿರುವ ಮಾನವನು ತನ್ನ ಜನಾಂಗವನ್ನೇ ಪೂರ್ಣವಾಗಿ ನುಂಗುವ ದಿನವನ್ನು ನಿರೀಕ್ಷಿಸುತ್ತಿದ್ದಾನೋ ಅಂತನಿಸುತ್ತದೆ.

**ಪ್ರವಾಹದೊತ್ತಡದಲ್ಲಿ ಪ್ರಜಾಸಂಖ್ಯೆ:—**

ಮಾನವನ ಎಲ್ಲ ಸಮಸ್ಯೆಗಳಿಗೆ, ಇಂದಿನ ಅವನ ಬವಣೆಗಳಿಗೆ ಪ್ರಜಾಸಂಖ್ಯೆ ಏರುತ್ತಿರುವುದೊಂದೇ ಮೂಲಕಾರಣವೆನ್ನುವ ಆಧುನಿಕರು ಬಹಳಷ್ಟು ಮಂದಿ ಇದ್ದಾರೆ. ಇದರ ಪ್ರಕಾರ ಈ ವ್ಯಸ್ತ ಪರಂಪರೆಯ ಪ್ರವಾಹದೊತ್ತಡದಲ್ಲಿ ಪ್ರಜಾಸಂಖ್ಯೆ ನೂರ್ಮಡಿಯಾಗಿ ತೇಲಿಹೋಗುತ್ತಿದೆ. ಆದರೆ ಈ ಸಮಸ್ಯೆಯನ್ನು ಮಾನವನೇ ಸೃಷ್ಟಿಸಿಕೊಂಡುದು ಎಂಬುದನ್ನು ಮರೆಯಲಾಗದು. ವ್ಯಾಪಾರ, ಪ್ರಚಾರ, ವಿಜ್ಞಾನಗಳ ಬಳಕೆಯಲ್ಲಿ, ನೀತಿಪರವಾಗಿಲ್ಲದ ಶಿಕ್ಷಣದಲ್ಲಿ, ಪ್ರಕೃತಿಪರವಾಗಿಲ್ಲದ ಬದುಕಿನಲ್ಲಿ ತನ್ನ ಎಲ್ಲ ಆತ್ಮಶಕ್ತಿಯನ್ನು ಕಳೆದುಕೊಂಡ ಮಾನವನು ಸಂಖ್ಯಾಭಿವೃದ್ಧಿಯಲ್ಲಷ್ಟೇ ಮುಂದುವರಿದಿದ್ದಾನೆ. ಇದರ ಹಿಂದೆ ಸಹಸ್ರವರ್ಷಗಳ ವ್ಯತ್ಯಸ್ತಗೊಂಡ ಜೀವನಮಾರ್ಗಗಳ ಇತಿಹಾಸವಿದೆ. ಈ ಕಾಲಾಂತರದ ಘಟನಾವಳಿಗಳ ಸರಪಣಿಯು ಇಂದು ಸ್ಫೋಟಕ ಹಂತವನ್ನು ತಲುಪಿದೆ.

ಪ್ರಜಾಸಂಖ್ಯೆ ಏರೊತ್ತಡದಲ್ಲಿದ್ದಾಗ್ಯೂ ಇಂದು ಜನಶಕ್ತಿಹ್ರಾಸವಾಗುತ್ತಿದ್ದು ಜನನಶಕ್ತಿಗೇ ಹೆಚ್ಚು ಮಹತ್ವ ದೊರೆತಿದೆ. ಎಲ್ಲೆಂದರಲ್ಲಿ ಪಿಳ್ಳೆ ಕೂಸುಗಳು ದಿಗಂಬರ ನೃತ್ಯ ನಡೆಸುತ್ತಿರುವುದನ್ನೇ ಕಾಣುತ್ತೇವೆ. ಇದಕ್ಕಾಗಿ ಏನೆಲ್ಲ ವೈಜ್ಞಾನಿಕ ಅಡ್ಡಿಗಳನ್ನು ತರಲು ಯತ್ನಿಸುತ್ತಿದ್ದೇವೆ! ಆದರೆ ಜನಶಕ್ತಿಯನ್ನು ಬಳಸುವಲ್ಲಿಯಾಗಲೀ ಜನನಶಕ್ತಿಯನ್ನು ಸಬಲಗೊಳಿಸುವಲ್ಲಿಯಾಗಲೀ ನಮ್ಮ ಗಮನ ಹರಿಯದಿರುವುದು ಅಚ್ಚರಿಯ ಸಂಗತಿ! ಇಂದಿನ ಜನನಶಕ್ತಿಯು (ಸಂಖ್ಯೆಯಲ್ಲ) ಪೀಳಿಗೆಯಿಂದ ಪೀಳಿಗೆಗೆ ದುರ್ಬಲಗೊಳ್ಳುತ್ತಿರುವುದನ್ನು ನಿರ್ಲಕ್ಷಿಸುವಂತಿಲ್ಲ. ಇದೇ ರೀತಿಯಲ್ಲಿ ಮುಂದುವರಿದರೆ ಪೀಳಿಗೆಯ ಬಲಕುಂದುವುದರಲ್ಲೂ ಆಶ್ಚರ್ಯವಿಲ್ಲ.

ಮಾನವನು ಸಾವಯುವ ವಿಕಾಸದ ವಿಭಿನ್ನ ಹಂತಗಳ ಅಧ್ಯಯನ ನಡೆಸುತ್ತಿದ್ದಾಗ್ಯೂ, ಅನುವಂಶೀಯ ಶಾಸ್ತ್ರಶೋಧಗಳು ನಡೆಯುತ್ತಿದ್ದಾಗ್ಯೂ, ಪೀಳಿಗೆಯ ಬಲವರ್ಧನೆಗೆ ಯಾವುದೇ ವಾಸ್ತವ ಯೋಜನೆಯನ್ನು ಕೈಗೊಂಡಂತೆ ತೋರುತ್ತಿಲ್ಲ. ಇತರ ಜೀವಿಗಳ ಸಂತಾನಾಭಿವೃದ್ಧಿಯ ವೈಖರಿ, ಸಂತಾನಕ್ಕಾಗಿ ಕೂಡುವ ವೈಖರಿ, ಉಳಿದ ವೇಳೆ ಸಂತಾನ ಶಕ್ತಿ ಹಾಳಾಗದಂತೆ ನೋಡಿಕೊಳ್ಳುವ ವೈಖರಿ—ಇವುಗಳಿಂದಾದರೂ ಮಾನವ ಪಾಠ ಕಲಿಯಬಹುದಾಗಿದೆ. ಈ ಪ್ರಕೃತಿಯು ಮಾನವನ ಗಮನಕ್ಕೆ ಬರುತ್ತಿಲ್ಲ; ಆ ಸೂಕ್ಷ್ಮತೆಗೆ ಮಾನವ ಇಳಿಯುತ್ತಿಲ್ಲ. ಪ್ರಕೃತಿಯನ್ನು ಸೂಕ್ಷ್ಮವಾಗಿ ಕಾಣುವ, ಕಂಡು ಅರಿತುಕೊಳ್ಳುವ, ಅರಿತು ನಡೆದುಕೊಳ್ಳುವ ಚೇತನವನ್ನು ಮಾನವನು ಹೊಂದಿದ್ದೂ ಇದನ್ನಾತ ನಿರ್ಲಕ್ಷಿಸುತ್ತಿರುವುದನ್ನು ಆತನ ಬುದ್ಧಿಯ ಪ್ರಮಾದಕ್ಕೆ ಇನ್ನೊಂದು ನಿದರ್ಶನವೆನ್ನೋಣವೆ? ಹೇಗಾದರೂ ಒಳಿತಿಗೋ ಕೆಡಕಿಗೋ, ಮಾನವನು ಪ್ರಕೃತಿಯತ್ತವೇ ಕೊನೆಗೊಮ್ಮೆ ಮುಖ ಮಾಡಬೇಕಾಗುವುದು ಖಚಿತವೇನೋ!

ಕೃತ್ರಿಮ ಲೈಂಗಿಕ ವಿಧಾನಕ್ಕೇ ಮತ್ತಷ್ಟು ಪ್ರೋತ್ಸಾಹ, ಪ್ರೇರಣೆ, ಪ್ರಚಾರಗಳು ಸಿಗುತ್ತಿರುವ ಕಾಲಪ್ರವಾಹದಲ್ಲಿ ಮಾನವನ ಸಂತಾನವೂ ದುರ್ಬಲ ಹಾಗೂ ನಿಸ್ಸತ್ವಗೊಳ್ಳುತ್ತಿರುವುದು ವಿದ್ಯಮಾನ. ಲಿಂಗಧರ್ಮದಲ್ಲಿ ಪಶುಗಳು ಮಾನವನಿಗೆ ಉತ್ತಮ ಪಾಠ ನೀಡಿಯಾವು. ಉದಾಹರಣೆಗೆ ಸಂತಾನಕ್ಕೆಂದೇ ಹೋರಿಗರೆಯುವ ಹಸು, ಕನ್ಯಾ

ಮಾಸದಲ್ಲಿ ಸಂತಾನಕ್ಕಾಗಿಯಷ್ಟೇ ಕಿರಿಚಾಡುವ ನಾಯಿಸೇನೆ-ಪ್ರಕೃತಿದತ್ತವಾದ ಲಿಂಗ ಧರ್ಮವನ್ನು ಸಂತಾನಕ್ಕಾಗಷ್ಟೇ ಬಳಸುತ್ತಿರುವುದನ್ನು ನಾವು ಗುರುತಿಸಬಹುದು.

ಸಾಲದೆಂದರೆ, ಮಳೆ ಬೆಳೆಯ ಸಮೃದ್ಧಿಯಲ್ಲಿ ಸತ್ವಪೂರ್ಣ ಸಂತಾನ ಬೆಳೆಸುತ್ತಿದ್ದ ಭಾರತೀಯ ಜನಾಂಗವಿಂದು ಪ್ರಕೃತಿವಿರೋಧವಾಗಿ ಸಾಗಿರುವ ಕಾರಣ, ಪ್ರಭಾವೀ ಮಳೆಯ ಕೊರತೆಯಿಂದಾಗಿ ಸತ್ವಪೂರ್ಣ ಆಹಾರವೂ ಸಿಗದೆ, ಸಂಕರಗೊಂಡ ಆಹಾರ ಸೇವನೆಯಿಂದ ವೀರ್ಯವೂ ನಿಸ್ಸತ್ವಹೊಂದಿ, ಲೈಂಗಿಕ ತೃಷೆಯಿಂದ ಸೋರಿ ಹೋಗುಳಿದ ದುರ್ಬಲತೆಯಲ್ಲಿ ಸಂತಾನ ಸೃಷ್ಟಿಯ ಕಾರ್ಯ ಮಾಡುತ್ತಿರುವುದರಿಂದ ದುರ್ಬಲಶಕ್ತಿಯ ಪ್ರಜಾವೃದ್ಧಿಯನ್ನು ಮಾಡುತ್ತಿದೆ. ದಾರಿದ್ರ್ಯ, ಸಂಕರ ಆಹಾರ, ಮಲಿನ ಪರಿಸರ, ವ್ಯಸ್ತ ಜೀವನ ಪರಂಪರೆಯಲ್ಲಿ ಬೆಳೆಯಬೇಕಾದ ಮಾನವ ಪೀಳಿಗೆಯ ಕುರಿತು ನಾವು ವಿವೇಚಿಸುವುದು ಅನಗತ್ಯವೆ? ಈ ಸಮಸ್ಯೆಗೆ ಇಂದಿನ ಜೀವನದಲ್ಲಿ ಎದ್ದುಕಾಣುವ ವ್ಯಸ್ತ ಪರಂಪರೆಯು ಪೋಷಕವಾಗಿಲ್ಲವೆಂದು ಹೇಳುವುದು ಹೇಗೆ?

## ಸ್ತ್ರೀಯ ಸ್ಥಾನ, ಮಾನ, ಪಾತ್ರ:-

ಈ ಸಮಸ್ಯೆಗೆ ಸ್ತ್ರೀಯರು ಪರಿಹಾರ ತೋರಬಲ್ಲರು. ಆ ಕಾರಣದಿಂದಲೇ ಆರ್ಯ ಧರ್ಮದಲ್ಲಿ ಸ್ತ್ರೀಯರನ್ನು ಪೂಜ್ಯಸ್ಥಾನದಲ್ಲಿರಿಸಲಾಗಿದೆ. ಜನಾಂಗದ ವಿಕಾಸ-ಸತ್ಸಂತಾನದ ದೃಷ್ಟಿಯಿಂದ ಸ್ತ್ರೀಯರ ಪಾತ್ರ ಮಹತ್ವದ್ದು. ಆದುದರಿಂದ ಸಮಾಜದ ಏರುಪೇರಿನಲ್ಲಿಯೂ ಸ್ತ್ರೀಯ ಪಾತ್ರ ಅಗೋಚರವಾದರೂ ಗಣನೀಯ. ವಿಕಾಸಕ್ಕೂ-ವಿನಾಶಕ್ಕೂ ಸ್ತ್ರೀಯು ಕಾರಣಳಾಗಬಲ್ಲಳು. ಆದರೆ ಇಂದು ಸ್ತ್ರೀಯು ಮಾನವನ ವಿಲಾಸದ ಸೊತ್ತಾಗಿ ಪರಿಣಮಿಸಿರುವುದು ಪಾಶ್ಚಾತ್ಯರಿಂದ ಪಡೆದ ಬಾಹ್ಯಮುಖ ದೃಷ್ಟಿಕೋನದಿಂದ, ಪಾಶ್ಚಾತ್ಯ ಸಂಸ್ಕೃತಿಯು ಬಳುವಳಿಯಾಗಿ ತಂದಿತ್ತ ಮಾಧ್ಯಮಗಳಿಂದ. ವಿಲಾಸದ ಇಂದ್ರಿಯ ಸುಖದಲ್ಲಿ ನಷ್ಟವಾಗುತ್ತಿರುವ ಸಂತಾನಶಕ್ತಿಯು ಉತ್ತಮ ಪೀಳಿಗೆಯನ್ನು ನೀಡುವಲ್ಲಿ ಎಡವುತ್ತಿರುವುದು ಇಂದು ವೇದ್ಯವಾಗುತ್ತಿದೆ. ಪಾಶ್ಚಾತ್ಯ ನಾಗರಿಕತೆಯ ರಥದ ಅಡಿಗೆ ಸ್ತ್ರೀ ಸಮಾಜ ಬೀಳುತ್ತಿರುವುದು ದುರದೃಷ್ಟಕರ.

ವಿವಾಹ ಪದ್ಧತಿಯು ಶ್ರೇಷ್ಠ ಧ್ಯೇಯವುಳ್ಳದ್ದು—ಜನಾಂಗದ ದೃಷ್ಟಿಯಿಂದ. ಮಾನವ ಸತ್ಸಂತಾನವನ್ನು ಪಡೆಯುವುದೇ ವಿವಾಹದ ಪರಮೋದ್ದೇಶ. ಆದರೆ ಇದು ಬರಿಯ ಕಾಮತೃಷೆ, ಕಾಮ ತೃಪ್ತಿಗಾಗಿ ಉಳಿದ ಸಂಸ್ಥೆಯೇನೋ ಅಂತನಿಸುವ ಹೀನಸ್ಥಿತಿಗೆ ಇಳಿದಿರುವುದು ಭಾರತೀಯ ಮನುಕುಲದ ದುರಂತ. ಈ ದುರಂತದಿಂದಾಗಿ ಲಿಂಗಧರ್ಮದ ವೈಜ್ಞಾನಿಕತೆಯೆಲ್ಲಾ ವಿಲಾಸಪ್ರಿಯ ಜೀವನದಲ್ಲಿ ಸೋರಿಹೋಗಿ ಸಂತಾನ ದುರ್ಬಲವಾಗುತ್ತಾ ಸಾಗಿದೆ! ಮಾನವೀಯತೆಯನ್ನು ಬಡಬಡಿಸುವ ಮಂದಿ ಆರ್ಯಧರ್ಮದ ಸಂತಾನದವರಾದ ಭಾರತೀಯರಿಗೆ ಸ್ತ್ರೀಧರ್ಮ-ಸ್ತ್ರೀಸ್ವಾತಂತ್ರ್ಯದ ಬಗ್ಗೆ ಉಪದೇಶಿಸುತ್ತಿರುವುದು ಬಹಳ ಮೋಜಿನ ಸಂಗತಿ!

ಸ್ತ್ರೀವಿಮೋಚನೆಯ ಬಗ್ಗೆ ಉಪದೇಶಿಸುವ ಮಂದಿ ಇಂದ್ರಿಯ ಚಾಪಲ್ಯಕ್ಕಾಗಿ ಸ್ತ್ರೀಯರನ್ನು ಯಾವ ಸ್ಥಾನದಲ್ಲಿಟ್ಟು ಅವರ ಮಾನ ತೆಗೆದು ಹೇಗೆ ಕುಣಿಸುತ್ತಿದ್ದಾರೆ ಎಂಬುದನ್ನು ವಿವೇಚಿಸುವುದು ಸೂಕ್ತ. ಸ್ತ್ರೀಯರನ್ನು ಬರಿಯ ಆಡಂಬರದ ವಿಲಾಸಪ್ರಿಯ

ತೆಗೆ ತಳ್ಳಿ ಅವರು ತಮ್ಮದೇ ಮೊಗ್ಗು ಕಿರಿಯರನ್ನೂ, ಯುವಸಂತಾನದವರನ್ನೂ ಗಮನಿಸದಂತೆ ಮಾಡುವುದನ್ನು, ಕಾಳಜಿ ಕಳಕೊಳ್ಳುವಂತೆ ಮಾಡುವುದನ್ನು ಇಂದು ತುರ್ತಾಗಿ ತಡೆಯುವುದು ಅಗತ್ಯವಲ್ಲವೆ? ನಮ್ಮ ಜೀವನದಲ್ಲಿ ಇಂದು ಇಂಥ ಒಂದು ವಿಷಮ ವಸ್ತುವೂ ತನ್ನದೇ ಆದ ಬಲೆಯನ್ನು ನೇಯುತ್ತಿರುವುದೂ ಖೇದದ ಸಂಗತಿ. ಸತ್ಸಂತಾನಾಪೇಕ್ಷಿ ಸ್ತ್ರೀಯರು ಲಿಂಗಧರ್ಮವನ್ನು ಸರಿಯಾಗಿ ತಿಳಿದುಕೊಂಡು ತಂತಮ್ಮ ಪುರುಷರ ಗುಣಗಳನ್ನು ತಿದ್ದಿ ತೀಡಬೇಕಾದ ಪರಿಸ್ಥಿತಿ ನಿರ್ಮಾಣವಾಗಿಲ್ಲವೆ ಇಂದು? ಇದಕ್ಕಾಗಿ ಸ್ತ್ರೀಯರು ಪೂಜಾರ್ಹರು! ಜನಾಂಗದ ಉತ್ಥಾನವಿಂದು ಸ್ತ್ರೀಯರ ಕೈಯಲ್ಲಿದೆ ಎಂದರೂ ಅತಿಶಯೋಕ್ತಿ ಇಲ್ಲ. ಆದರೆ ಪ್ರಸ್ತುತದ ಸ್ಥಿತಿಯನ್ನು ನಾವು ನಾವೇ ಅವಲೋಕಿಸುವುದು ಒಳಿತಲ್ಲವೆ?

ಇಂದು ಸಂಖ್ಯೆ ನೋಡಿ ತತ್ತರಿಸುತ್ತಿರುವ ಮಾನವನಿಗೆ–ಲಿಂಗಧರ್ಮದ ಬೆಲೆ, ಪ್ರಕೃತಿಧರ್ಮದ ಸೆಲೆ, ಮೂಲಬೇರಿನಿಂದಲೇ ಬೇರಾಗುತ್ತಿರುವ ಪೀಳಿಗೆಯ ನೆಲೆ–ಇವಾವುವೂ ಸಮೀಪತರವಾಗಿ ಗೋಚರವಾಗುತ್ತಿಲ್ಲ; ದೂರಗಾಮಿ ಚಿಂತನೆಯೇ ಬುದ್ಧಿಗೆ ಬರುತ್ತಿಲ್ಲ. ಬಂದರೂ ಸ್ತ್ರೀಯನ್ನು ಗೌರವದಿಂದ ಕಾಣುವಲ್ಲಿ ಮೃಗೀಯ ಚಪಲತೆ ಎಡವಟ್ಟಾಗುವುದು. ಲೋಲುಪತೆಗೆ ಎಡೆಕೊಡುವ ಷೋಕಿ-ಆಡಂಬರಗಳ ಆಡೊಂಬಲವಾಗಿರುವ ಸ್ತ್ರೀ ಸಮಾಜವು ಈ ವ್ಯಸ್ತಜೀವನವನ್ನು ಹೇಗೆ ಸರಿದಾರಿಗೆ ತಂದೀತು ಎಂಬ ಭೀತಿಗೆ ಇಂದಿನ 'ನಾಗರಿಕತೆ'ಯ ಹೆಸರಲ್ಲಾಗುತ್ತಿರುವ ವಿದ್ಯಮಾನವೇ ಉಗಮಬಿಂದು!

**ನಮ್ಮ ಆಳ್ವಿಕೆ:—**

ಆರ್ಯಧರ್ಮದ ಆಳ್ವಿಕೆಯ ರೀತಿಗೂ ಇಂದಿನ ಆಳ್ವಿಕೆಯ ರೀತಿಗೂ ತುಂಬಾ ವ್ಯತ್ಯಾಸಗಳಿರುವುದೂ ಕಾರಣವಲ್ಲವೆಂದು ನಿರಾಕರಿಸುವಂತಿಲ್ಲ. ಬೇರೆಲ್ಲಾ ಕಾರಣಗಳ ಜತೆಯಲ್ಲಿ ನಮ್ಮ ಇತಿಹಾಸವನ್ನೂ ಒಮ್ಮೆ ಅವಲೋಕಿಸುವುದು ಒಳಿತು. ಹಿಂದೆ ರಾಜನು ಬೆರಳೆಣಿಕೆಯ ತನ್ನ ಅನುಯಾಯಿಗಳ ಹಾಗೂ ರಾಜನೀತಿ–ಅರ್ಥಶಾಸ್ತ್ರ–ಧರ್ಮಶಾಸ್ತ್ರಗಳಲ್ಲಿ ಪರಿಣತ ಶಿರೋಮಣಿಗಳ ಸಲಹೆ ಸಹಯೋಗಗಳಿಂದಾಗಿ ಸಮಷ್ಟಿ ಸಮಾಜವನ್ನು ಹಿಡಿತದಲ್ಲಿಟ್ಟುಕೊಳ್ಳುವ ಆಡಳಿತ ಶಕ್ಯವಿತ್ತು. ಇಂಥ ಆಳ್ವಿಕೆಯಲ್ಲಿ ನ್ಯಾಯಾನ್ಯಾಯಗಳ ಪರಿಣಾಮ ನೇರ, ಮಾನವ ಧರ್ಮದಂತೆ ಬಾಳುವ ಮಾನವನೇ ಅಲ್ಲಿ ಧೀರ.

ಇದೀಗ ಸಹಸ್ರ ವರ್ಷಗಳಿಂದ ಭಾರತದಲ್ಲಿ ಆಡಳಿತ ನಡೆಸುವವರ ತಂಡವಂತೂ ಬೆಳೆಯುತ್ತಲೇ ಸಾಗಿದೆ. ಪ್ರಚಾರ, ವ್ಯಾಪಾರ, ವಿಜ್ಞಾನಗಳು ಜೀವನದ ಸೂಕ್ಷ್ಮ ಎಳೆಗಳನ್ನು ಜಟಿಲಗೊಳಿಸುತ್ತಲೇ ಸಾಗಿವೆ. ಆಚಾರ ವಿಚಾರಗಳಲ್ಲಿನ ವಿಲಾಸವೂ ಏರುತ್ತಲೇ ಹೋಗಿದೆ. ಇದು "ಪ್ರಗತಿ" ಎನಿಸಿದೆ. ಇಂಥ ಆಡಳಿತಕ್ಕೊಳಗಾದ ಭಾರತೀಯ ಮಂದಿಯಲ್ಲಿ ಮಾನವತೆಯ ಕಣಕಣಗಳೂ ಉದುರುತ್ತಾ ಸಾಗಿವೆ.

ಜಗತ್ತಿನಾದ್ಯಂತ ಸಮ್ಮೋಹಿನಿ ವಿದ್ಯೆಯೇನೋ ಎಂಬಂತೆ ಫಲಿಸಿ ಪ್ರಜಾರಾಜ್ಯದ ಹೆಸರಿನಲ್ಲಿ 'ಸ್ವಯಂಭೂ' ಸಾಮ್ರಾಜ್ಯ ಇಂದು ತಲೆಎತ್ತಿ ಮೆರೆಯುತ್ತಿದೆ; ಮರೆಯಲ್ಲಿ ನೊರೆಯುತ್ತಿದೆ; ಜನಕೋಟಿಯ ಮಾನವೀಯ ಬದುಕನ್ನು ಮರೆಯುತ್ತಿದೆ. ನಮ್ಮ ಆಳ್ವಿಕೆಗಳಿಂದು ನಮ್ಮ ಜೀವನವನ್ನು ಯಾವ ಹಂತಕ್ಕೆ ತಳ್ಳಿವೆ ಎಂಬ ಬಗ್ಗೆ ಸಿಂಹಾವಲೋಕನವನ್ನೊಮ್ಮೆ ನಡೆಸುವುದು ಲೇಸು! ಉಳಿದೆಲ್ಲ ವಿಷಮ ಸಂಗತಿಗಳಿಗೆ ಸ್ವಾತಂತ್ರ್ಯ ದೊರೆಯು

ವುದೂ 'ಸ್ವಯಂಭೂ ಸಾಮ್ರಾಜ್ಯ'ದಲ್ಲಿ ಮಾತ್ರ—ವ್ಯಕ್ತಿ ವ್ಯಕ್ತಿಯ ಅಹಂಕಾರಕ್ಕೆ ಸಿಂಹಾಸನ ಸಿದ್ಧವಾದಾಗ ಮಾತ್ರ! ಆ ಸಿಂಹಾಸನವಿಂದು ಸಿದ್ಧವಾಗಿದೆ ಪ್ರಜಾರಾಜ್ಯದ ನೆಪದಲ್ಲಿ !

**ನಮ್ಮ ಪರಿಸರ:—**

ಮಲಿನಗೊಳ್ಳುತ್ತಿರುವ ಭೂ ಪರಿಸರದ ಬಗ್ಗೆ ವಿಜ್ಞಾನಿಗಳೂ ಇಂದು ತಲೆ ಕೆಡಿಸಿ ಕೊಳ್ಳಲು ಪ್ರಾರಂಭಿಸಿದ್ದಾರೆ. ವೈಜ್ಞಾನಿಕ ಸಂಶೋಧನೆಗಳಿಂದ ಅಭಿಜಾತ ಮಲಿನ ವಸ್ತು ಗಳಿಂದಾದ ವಾಯು–ಜಲ ಮಾಲಿನ್ಯದ ಬಗ್ಗೆ ಗುಲ್ಲು ಎದ್ದಿದೆ. ಪ್ರಕೃತಿಯಲ್ಲಿರುವ ಪ್ರತಿ ಯೊಂದೂ ಸಂಕರಗೊಳ್ಳುತ್ತಿರುವ ಬಗ್ಗೆ ಪರಿಸರ ವಿಜ್ಞಾನಿಗಳು ಎಚ್ಚರಿಸುತ್ತಿದ್ದಾರೆ. ಇವಾ ವುದರ ಕುರಿತೂ ತಲೆ ಕೆಡಿಸಿಕೊಳ್ಳದೆ ನವ್ಯೋನವೀನ ಸಂಕರಕಾರಿ ಸಂಶೋಧನೆಗಳ ಸಂಕೋ ಲೆಯೂ ಬೆಳೆಯುತ್ತಿದೆ. ಪರಿಸರವು 'ಮಾನವೀಯತೆ'ಯನ್ನು ಕಾಪಾಡಿಕೊಳ್ಳಲು ಅವಶ್ಯ ಪೂರಕ ಸ್ಥಿತಿ ಎಂಬುದು ಈ ವಿಜ್ಞಾನಿಗಳು ಅರಿತಿಲ್ಲವೆ? ಸಾಲದೆಂದರೆ, ಪ್ರಕೃತಿಯಿಂದ ಧಾತುಗಳ ಸೂರೆಮಾಡಿದರೆ ಪ್ರಕೃತಿಯು ಮುದಿಯಾಗಿ ಸ್ವಾಭಾವಿಕ ವಿಕೋಪಗಳಿಗೆ ಕಾರಣ ವಾಗದೆ? ಎಲ್ಲಕ್ಕೂ ಮಿಗಿಲಾಗಿ ಮಾನವ ಜೀವಿಗೆ ಇಂದು ಸಿಗುತ್ತಿರುವ ಆಹಾರವೂ ಸಂಕರ ಗೊಂಡು ಶುದ್ಧ ಜೀವಾನಿಲ ಸಿಗದಿರುವ ಕಾರಣ ಸೂಕ್ಷ್ಮ ವೈಜ್ಞಾನಿಕ ಸ್ಥಿತ್ಯಂತರಗಳು ಅನಿವಾರ್ಯವಲ್ಲವೆ?

ಭೂ ವಾತಾವರಣದ ಸುತ್ತಲೂ ನಲುವತ್ತು-ಐವತ್ತು ಮೈಲು ದಟ್ಟವಾದ ಮಳೆಯ ಅಂಶವಿದ್ದರೂ ಬರಿಯ ನಾಲ್ಕೈದು ಮೈಲು ದಟ್ಟ ಮಳೆಯ ಅಂಶ ಮಾತ್ರವೇ ಇಂದು ಭೂಮಿ ಯನ್ನು ತಲುಪುತ್ತಿರುವುದೆಂದು ಒಂದು ವೈಜ್ಞಾನಿಕ ಹೇಳಿಕೆ. ಅಂದರೆ ಮಾನವ ಜೀವಿಗಳ ಇಂದಿನ ಅಪ್ರಾಕೃತಿಕ ನಡೆವಳಿಗಳಿಂದಾಗಿ ಈ ಮಳೆ ಭೂಮಿಗೆ ಬೀಳದೆ ಉಳಿದಿದೆಯೆ? ಈ ಅಲ್ಪ ಪ್ರಮಾಣದ ಮಳೆಯಲ್ಲಿ ಇರುವ ಸೂರ್ಯಾಂಶ, ರೋಗಹಾರಕ ಅಂಶ, ಕ್ರಿಮಿನಾಶಕ ಅಂಶ— ಎಲ್ಲವೂ ಅತ್ಯಲ್ಪ ಪ್ರಮಾಣದ್ದು. ಉಳಿದ ದಟ್ಟವಾದ ಓಜಃಪೂರ್ಣ ಮಳೆಯ ಅಂಶವನ್ನು ಭೂಮಿಯು ಎಂತು ಪಡೆದೀತು? ಪ್ರಕೃತಿ ಸಹಜವಾಗಿ ಬದುಕುವ ಇತರೇ ಜೀವಿಗಳೇನಾದರೂ ಇದಕ್ಕೆ ಕಾರಣವೆ? ಅಥವಾ, ಅಪ್ರಾಕೃತಿಕವಾಗಿ ಬದುಕುತ್ತಿರುವ ಮಾನವ ಜೀವಿಗಳ ನಡೆ ವಳಿಗಳೇನಾದರೂ ಕಾರಣವೆ? ಈ ಅಪೂರ್ಣ ಬಲದ ಮಳೆಯಿಂದ ಸತ್ವಪೂರ್ಣ ಆಹಾರ ಪಡೆಯುವುದು ಹೇಗೆ? ಸತ್ವಪೂರ್ಣದ ಆಹಾರವಿಲ್ಲದೆ ಮಾನವನ ವೀರ್ಯಬಲ ಸತ್ವಪೂರ್ಣವಾಗು ವುದೆಂತು? ಅಂದರೆ ಮಾನವ ವಿಕಾಸವೆಂತು ಸಾಧ್ಯ? ವೀರ್ಯಬಲ ದುರ್ಬಲವಾಗುತ್ತಿರುವ ಮಾನವನು 'ಪ್ರಗತಿ'ಯತ್ತ ಸಾಗುವುದು ಎಂತು ಸಾಧ್ಯ? ಈ ಒಂದು ವಿಷಮ ವರ್ತುಲದಲ್ಲಿ ನಾವು ಮಾನವ ವಿಕಾಸವನ್ನು ಕಾದು ನೋಡಬೇಕು: ಎಂಥ ದುರದೃಷ್ಟ ಸ್ಥಿತಿ! ಬದುಕಿನ ಕ್ಷಣಕ್ಷಣವನ್ನೂ ಈ ಎಲ್ಲ ಸಂಗತಿಗಳು ತಲಸ್ಪರ್ಶ ಮಾಡುತ್ತಿರುವಾಗ್ಯೂ ನಾವು 'ಸ್ವಯಂ ಭೂ'ಗಳಾಗಿರುವುದು ವಿಚಿತ್ರವಲ್ಲವೆ?

'ಸ್ವಯಂಭೂ'ಗಳ ಸಂಖ್ಯಾಭಿವೃದ್ಧಿಯಲ್ಲಿ ಪರಿಹಾರ ಕಾಣದೆ ಭಾರತೀಯ ಜನಾಂಗ ವೇನಾದರೂ ತೇಲಿಹೋಗುತ್ತಿರುವುದು ನಮಗೆ ಗೋಚರಿಸೀತೇ? ಮಾನವತೆಯ ಔನ್ನತ್ಯಕ್ಕೇರ ಬೇಕಾದ ಭಾರತೀಯನೂ ವಿಕ್ಷಿಪ್ತನಾಗುತ್ತಿರುವುದರ ಅರಿವು ನಮಗಾದೀತೇ? ಬಣ್ಣ ಬಣ್ಣದ

ಬೇಗಡೆ ನಾಮಕರಣಗಳನ್ನು ಆಮದಾಗಿಸಿಕೊಂಡು ನಮಗಂಟಿಸಿಕೊಂಡು ಜನಾಂಗವನ್ನು ವಿಭ್ರಮೆಗೆ ತಳ್ಳಿ ವಿನಾಶಕ್ಕೇನಾದರೂ ಮಾನವನು ಆಹ್ವಾನ ನೀಡುತ್ತಿದ್ದಾನೆಯೇ ಅಂತನಿಸುವ ಸಂಧಿಗ್ಧದಲ್ಲಿ ನಾವಿದ್ದೇವೆ. ಮನುಕುಲದಲ್ಲಿ ಆಸ್ಥೆಉಳ್ಳವರು ವಿವೇಚಿಸುವುದು ಅನಿವಾರ್ಯ. ಇಂಥ ವಿದ್ಯಮಾನದಲ್ಲಿ ಮಾನವೀಯತೆಯ ಆಧಾರವೇ ನಷ್ಟವಾಗುತ್ತಿರುವುದು. ಇನ್ನೊಂದೆಡೆ ಆಸುರೀಶಕ್ತಿಯ ಬೆಳವಣಿಗೆಗೆ ಪೋಷಕ ವಾತಾವರಣವೂ ನಿರ್ಮಾಣವಾಗುತ್ತಾ ಸಾಗುತ್ತಿರುವುದು!

### ಮಾನವ ಧರ್ಮವೆತ್ತ?

ಮಾನವರಿಗೆ ಧರ್ಮ ಒಂದೇ. ಅದು ಮಾನವಧರ್ಮ. ಅದುವೇ ಸನಾತನವಾದ ಪ್ರಕೃತಿಧರ್ಮ. ಆದರೆ ಆ ಧರ್ಮವಿಂದು ಗೌಣವಾಗಿ ಮತಾಚಾರದ ಕಗ್ಗತ್ತಲೆಯಲ್ಲಿ ಮತಿಭ್ರಮೆಯಾಗುತ್ತಿರುವುದು. ಭಾರತದ ಮಟ್ಟಿಗಂತೂ ಇದು ಸತ್ಯಸ್ಯಸತ್ಯ ಸಂಗತಿ. ಇದರಿಂದಾಗಿ 'ಸ್ವಯಂಭೂ' ಮತಗಳನ್ನು ಸ್ವಾರ್ಥಕ್ಕಾಗಿ ಬೆಳೆಸುವ ಪ್ರವೃತ್ತಿಯಲ್ಲಿ ಮಾನವನು ತನ್ನನ್ನು ತಾನು ಯಾವ ಹಂತಕ್ಕೆ ತಳ್ಳಿಕೊಂಡಿದ್ದಾನೆ?

ಮಾನವನು ಇಂದು ಧರ್ಮವನ್ನು ವರ್ಣಗಳ ಅಧೀನ ಕಟ್ಟಿ ಇಡಲು ಹವಣಿಸುತ್ತಿದ್ದಾನೆ. ವರ್ಣವಾದರೋ ಧರ್ಮದ ಅಧೀನವಿರಬೇಕಾದ್ದು. ವರ್ಣವನ್ನು ಹುಟ್ಟಿನಿಂದ ಬಂದ ಜಾತಿಗೆ ಸಮೀಕರಿಸುವುದಾಗಲೀ, ಧರ್ಮವನ್ನು ಮತದೊಂದಿಗೆ ಸಮೀಕರಿಸುವುದಾಗಲೀ ಸಮಷ್ಟಿ ಸಮಾಜಕ್ಕೆ ಜೀವ ತುಂಬುವ ಕಾರ್ಯವಲ್ಲ. ಇವು ಬರಿಯ ಕಚ್ಚಾಟ–ಹುಚ್ಚಾಟಕ್ಕೆ ಕಾರಣವಾದಾವು! ಆದರೆ ಇಂದು ನಮ್ಮ ಜೀವನದಲ್ಲಿರುವ ವಾಸ್ತವಸಂಗತಿ ಯಾವುದು? ಧರ್ಮದ ಅಧೀನವಿರಬೇಕಾದ ವರ್ಣವು ಇಂದು ಜಾತಿಯಾಗಿ ರೂಪಾಂತರ ಹೊಂದಿ ಆ ಜಾತೀಯ ಅಧೀನದಲ್ಲಿ ಧರ್ಮವನ್ನು ಅಧರ್ಮಮಾರ್ಗದಲ್ಲಿ ಹಿಡಿದಿಡುವ ಚಮತ್ಕಾರಿಕ ಕ್ರಿಯೆಯೊಂದು ಸಾಂಗೋಪಾಂಗ ಸಾಗಿದೆ—ಜೀವನದ ಎಲ್ಲ ಹಂತಗಳಲ್ಲೂ!

ಶಿಥಿಲಗೊಳಿಸಿದ, ಇನ್ನೂ ಶಿಥಿಲಗೊಳ್ಳುತ್ತಿರುವ ಧರ್ಮದ ಹೆಸರನ್ನಿಟ್ಟು ಅಧರ್ಮದ ಪ್ರಚಾರ–ಆಚಾರದಲ್ಲಿ ನೈತಿಕತೆಯೂ ನೀತಿ ಕೆಡಿಸಿಕೊಂಡು ವಾಸ್ತವ ನೀತಿವಂತನ ಬದುಕು ಬರಡಾಗುತ್ತಿರುವುದರಲ್ಲಿ ಮಾನವನಿಗೆ ಸಂತುಷ್ಟಿ ಇರುವುದೇನೋ ಎಂಬ ಸಂಶಯ ಮೂಡುತ್ತದೆ. ಬಂಧುಭಾವದ ಬಂಧನದಲ್ಲಿ ಬಾಳು ಸಾಗಿಸಬೇಕಾದ ಮಾನವನು ಇಂದು ತನ್ನ ಪ್ರಭೇದದ ಉತ್ಸಂಖ್ಯೆಯ ಜಂಗುಳಿಯಲ್ಲಿ, ಭೇದಭಾವದ ಸಂವಾಹನದಲ್ಲಿ, ಮಾನವ ಧರ್ಮವು ನೆಲಕಚ್ಚುತ್ತಿರುವ ನೆಲೆಯನ್ನು ಸ್ಪಷ್ಟವಾಗಿ ಕಾಣುವ ಸನ್ನಿವೇಶದಲ್ಲಿ ಬದುಕುತ್ತಿದ್ದಾನೆ! ಇದು ಅತಿಶಯೋಕ್ತಿಯೆ?

ಮಾನವನ ಮತಾಚಾರಗಳು ಬರಿಯ ಕಂದಾಚಾರಗಳಾಗಿಯೋ, ಡಂಭಾಚಾರಗಳಾಗಿಯೋ ಪರಿಣಮಿಸಿಲ್ಲವೆ? ಧರ್ಮ ಅಥವಾ ಪ್ರಕೃತಿಯ ಸಂಪರ್ಕದಿಂದ ಎಳೆಎಳೆಯಾಗಿ ವಿದಾಯ ಪಡೆಯುತ್ತಿರುವ ಇಂದಿನ ಮಾನವನಿಗೆ ಅಕ್ರಮ, ಅಡ್ಡಹಾದಿಗಳಿಗೆ ಮಾರ್ಗ ಅನಾತಂಕವಾಗಿಲ್ಲವೆ? ಪ್ರಕೃತಿಯ ನಿಯಮಗಳನ್ನು ಮತ್ತೊಮ್ಮೆ ಸ್ಪಷ್ಟಪಡಿಸಿಕೊಂಡು ಬದುಕಬೇಕಾದ ಅನಿವಾರ್ಯ ಸ್ಥಿತಿ ಇಂದು ನಿರ್ಮಾಣವಾಗಿಲ್ಲವೆ? ಒಂದೊಂದೂ ಗಹನವಾದ ವಿಚಾರ, ವಿವೇಚನೀಯ.

ಈ ಮಧ್ಯೆ ಪ್ರಚಾರದ ಪ್ರಪಾತಕ್ಕೆ ಸಿಲುಕದ, ಪ್ರವಾಹದ ಸೆಳೆತಕ್ಕೆ ಬೀಳದ, ಸಹೃದಯ ಸುಮಾನಸರ ಅನುಸರಣೆಯಲ್ಲಿ ಇಲ್ಲದ, ನಿರ್ವಿಕಾರರಾಗಿರುವ ಪ್ರಜ್ಞಾವಂತ ಮಾನವನನ್ನು ಯಾವ ಮೂಲೆಯಿಂದ ಹುಡುಕಿ ತರುವುದು? ಇಂಥವರನ್ನು ಅಮಾನುಷ ಪ್ರವಾಹದ ಮಂದಿಯೇನಾದರೂ ಮಾನಸಿಕ ಬಂಧನದಲ್ಲಿ ಇರಿಸಿದ್ದಾರೆಯೆ? ಅಥವಾ, ಧ್ಯೇಯಾದರ್ಶಹೀನ ಲೈಂಗಿಕ ವಿಹಾರ–ವಿಕಾರಗಳ ಸೆಣಸಾಟದ ಮಧ್ಯೆ ಬರಲಾರದೆ ಅವರು ಉಳಿದಿದ್ದಾರೆಯೆ? ಮಾನವ ಧರ್ಮದಲ್ಲಿ ಆಸ್ಥೆಉಳ್ಳವರು ಅಂಥ ಪ್ರಜ್ಞಾವಂತರ ಅನ್ವೇಷಣೆ ಮಾಡಬೇಕಾಗಿದೆ. ಕಿಡಿ ಇರುವುದಂತೂ ಖಾತ್ರಿ. ಗಾಳಿ ತೂರಿದರೆ ಜ್ಯೋತಿ ಸೃಷ್ಟಿಯಾದೀತು–ಮಾನವ ಜೀವನದ ಹೊಂಬೆಳಕಾಗಿ, ಮಾನವ ಜೀವನದ ಸುಗಮ ಪ್ರಕೃತಿಪರ ಮಾರ್ಗವಾಗಿ! ಆದುದರಿಂದ ಆಗಲೇಬೇಕಾದ ಕಾರ್ಯ ಮಾನವ ಧರ್ಮವೆತ್ತ ಎಂಬುದು.

**ಪರಿಹಾರ ಪ್ರಕೃತಿಯ ಮಡಿಲಲ್ಲಿ:—**

ನಾವು ಬದುಕುತ್ತಿರುವ ಜೀವನ ವ್ಯಸ್ತಪರಂಪರೆಯಲ್ಲಿ ಎಂಬ ಅರಿವು ಮೂಡುತ್ತಲೇ ಇದೇ ಪ್ರಕೃತಿಯಲ್ಲಿ ಬದುಕಬೇಕಾದ ನಾವು ಇವೆಲ್ಲ ಅಪರಿಹಾರ್ಯವೆಂದು ಕೈಚೆಲ್ಲಿ ಕೊಡುವುದು ತರವಲ್ಲ. ಸಮಸ್ಯೆಗಳ ಮಧ್ಯೆ ನಾವೂ ಪ್ರವಾಹದಲ್ಲಿ ಕೊಚ್ಚಿಕೊಂಡೊಯ್ಯಲ್ಪಡದಂತೆ ತಡೆಯುವುದು ಅನಿವಾರ್ಯವಲ್ಲವೆ?

ಪ್ರಕೃತಿ ತನ್ನಲ್ಲಿ ಕೆಲವೊಂದು ನಿಯಮಗಳನ್ನು ಹೊಂದಿದೆ. ಪ್ರಪಂಚವು ಇದರ ನಿಯಮಗಳಾಧೀನವಾಗಿದ್ದಷ್ಟು ಕಾಲ ಜೈವಿಕ–ಅಜೈವಿಕ ವಿಕಾಸಕ್ಕೆ ಎಡೆ ಇದೆ. ಸೌರ ಮಂಡಲದ ಸದಸ್ಯವಾಗುಳ್ಳ ಭೂಗ್ರಹ ಮತ್ತು ಸೂರ್ಯರ ಶಕ್ತಿಯನ್ನು ಪಡೆದೇ ನಮ್ಮ ಪ್ರಕೃತಿಯಲ್ಲಿ ಜೈವಿಕ-ಅಜೈವಿಕ ವಿಕಾಸ ಸಾಧ್ಯ. ಸೌರವ್ಯೂಹದ ಸದಸ್ಯ ಗ್ರಹಗಳೆಲ್ಲಾ ಪೂರ್ಣ ವಿಕಾಸಗೊಂಡಿದ್ದರೂ ಭೂಗ್ರಹ ಇನ್ನೂ ವಿಕಾಸದ ಹಂತದಲ್ಲಿಯೇ ಉಳಿದಿರುವುದಕ್ಕೆ ಪ್ರಾಯಶಃ ಈ ಗ್ರಹದ ಬುದ್ಧಿವಂತವೆನಿಸಿದ ಜೀವಿಗಳ ಪ್ರಮಾದದ ನಡೆವಳಿಗಳೇ ಕಾರಣ ವಿರಬಹುದು. ಸಂಕರವನ್ನು, ಬೆರಕೆಯನ್ನು ಸಹಿಸದೆ ತಿರಸ್ಕರಿಸುವ ಪ್ರಕೃತಿಯಲ್ಲಿ ಅಜೈವಿಕ ವಿಕಾಸಕ್ಕೆ ತಡೆಯಾಗಿರುವುದರಿಂದ ಈ ಗ್ರಹವು ವಿಕಾಸವಾಗದೆ ಉಳಿದಿರಬೇಕು!

ಭೂಗ್ರಹದ ಮೇಲಿನ ಸಕಲ ಜೀವಿಗಳೂ ಪ್ರಕೃತಿಧರ್ಮಕ್ಕೆ ಅನುಗುಣವಾಗಿ ಬದುಕುತ್ತಿವೆ. ಬುದ್ಧಿ ಬೆಳೆದಿರುವ ಮಾನವ ಮಾತ್ರನೇ ಇದಕ್ಕೆ ಅಪವಾದ. ಲಕ್ಷಕ್ಕೊಬ್ಬರಂತೆ ಸತ್ವಪೂರ್ಣ ಪುರುಷ ಅಥವಾ ಸ್ತ್ರೀ ಇರುತ್ತಿದ್ದರೂ ಪ್ರಕೃತಿಯಲ್ಲಿ ಮನುಕಲದವರಿಂದ ಮನುಕುಲಕ್ಕಾದ ಕೊರತೆಯನ್ನು ಸರಿಪಡಿಸಲು ಸಾಧ್ಯವಾಗತ್ತಿತ್ತೇನೋ! ಪ್ರಕೃತಿಯ ಮೂಲ ತತ್ತ್ವಗಳನ್ನು ತಿಳಿಮಕೊಳ್ಳಲು ಮಾನವನ ಅಂಗಾಂಗ ರಚನೆ–ಇಂದ್ರಿಯಗಳು ರಹದಾರಿಗಳಂತಿವೆ. ಆದರೆ ಇದನ್ನು ಕಂಡುಕೊಳ್ಳುವುದರ ಕಳಕಳಿ ಯಾರಿಗೂ ಬಂದಂತಿಲ್ಲ!

ಯಾವುದೇ ಜೀವಪ್ರಭೇದವು ಸ್ವಜಾತಿ ಸದಸ್ಯರನ್ನು ಕೊಂದುತಿನ್ನುವುದು ದುರ್ಲಭ. ಆದರೆ ಮನುಷ್ಯ ಪ್ರಭೇದದ ಸ್ಥಿತಿ ಬೇರೆಯೇ ತೆರನಾದುದು. ಮನುಷ್ಯನ ಇಂದಿನ ವರ್ತನೆಗಳು ಪರೋಕ್ಷವಾಗಿ ಸ್ವಭೇದನಾಶಕ್ಕೇ ಪೂರಕವಾಗಿರುವುದು ಗಮನಾರ್ಹ. ಇದು ನಾಗರಿಕ ಎಂಬ ಹೆಸರನ್ನಿರಿಸಿಕೊಂಡು ಅನಾಗರಿಕ ಹಂತವನ್ನು ಪ್ರಚುರಪಡಿಸುವ ಆಮಾಯಕ ಇಂದ್ರಜಾಲವಲ್ಲವೆ?

ಪ್ರಕೃತಿಯ ಇತರೇ ಜೀವಿಗಳು ಭೂಮಿಯ ಗುರುತ್ವಾಕರ್ಷಣ ಎಳೆಗಳೊಂದಿಗೆ ಸಮರ್ಪಕವಾದ ಸಂಪರ್ಕವನ್ನು ಹೊಂದಿರುವುದರಿಂದಲೇ ಪ್ರಕೃತಿದತ್ತವಾದ ಸ್ವಪ್ರಭೇದ ರಕ್ಷಣೆಯ ಸಾಮರ್ಥ್ಯ ಹಾಗೂ ಪ್ರವೃತ್ತಿ ಎರಡನ್ನೂ ಉಳಿಸಿಕೊಂಡಿವೆ. ಮಾನವನಿಗೆ ಇಂದು ಈ ಎಳೆಗಳೊಂದಿಗೆ ಸಮರ್ಪಕವಾದ ಸಂಪರ್ಕ ಉಳಿದಿಲ್ಲ.

ಸೂರ್ಯಕಿರಣದ ಅಲ್ಟ್ರಾವಾಯಲೆಟ್, ಇನ್ಫ್ರರೆಡ್ ಕಿರಣಾಂಶಗಳು ಪೂರ್ಣ ಪ್ರಮಾಣದಲ್ಲಿ ಭೂಗ್ರಹದ ಪರಿಸರಕ್ಕಾಗಲೀ ಮಾನವನಿಗಾಗಲೀ ನಿಲುಕುತ್ತಿಲ್ಲ. ನಿಲುಕುತ್ತಿರುವ ಕನಿಷ್ಠ ಪ್ರಮಾಣವಾದರೂ ಇತರೇ ಜೀವಿಗಳ ಜೈವಿಕ ಕ್ರಿಯೆಗಳಷ್ಟೇ ಪೂರ್ಣಪ್ರಮಾಣದಲ್ಲಿ ಚೋದಕ. ಇವು ಪ್ರಕೃತಿಧರ್ಮವನ್ನು ಉಳಿಸಿಕೊಂಡಿರುವುದಾದರೂ ಇದೇ ಕಾರಣದಿಂದಿರಬಹುದು. ಇಂಥಲ್ಲಿ ಮಾನವ ಮತ್ತೆ ಪ್ರಕೃತಿಯಿಂದಲೇ ಪಾಠ ಕಲಿಯಬೇಕಾಗುವುದು—ಉತ್ಪಾತಕ್ಕಾಗಲೀ, ಉತ್ಥಾನಕ್ಕಾಗಲೀ !

ಮಾನವರಲ್ಲಿ ಬುದ್ಧಿ-ಪ್ರಜ್ಞೆಗಳೆರಡೂ ರೂಢಗೊಂಡಿದ್ದರೂ ನಾವು ಬುದ್ಧಿಯ ಪ್ರಮಾದಗಳನ್ನೇ ಬೆಳೆಸುತ್ತಾ ಪ್ರಜ್ಞೆಯ ಬೆಳಕನ್ನು ಕತ್ತಲಾಗಿಸುತ್ತಾ ಸಾಗುವ ಪ್ರಸ್ತುತದ ವೈಪರೀತ್ಯದಲ್ಲಿ ವಿವೇಚನಾಶೂನ್ಯತೆಗೆ ಬೆಲೆ ತೆರಬೇಕಾಗಿದೆ. ಮಾನವನಿಗೆ ವಿಶಿಷ್ಟವಾಗಿ ಉಳ್ಳ ಹೃದಿಶಕ್ತಿ, ಮನಶ್ಶಕ್ತಿಗಳೂ ನಿಷ್ಕ್ರಿಯಗೊಳ್ಳುವ ಸಾಧ್ಯತೆಯಲ್ಲಿ ಅವುಗಳನ್ನು ಮತ್ತೊಮ್ಮೆ ಸಕ್ರಿಯಗೊಳಿಸಬೇಕಾದ ತುರ್ತು ಇದೆ. ಪ್ರಕೃತಿಗೆ ನಿಕಟವರ್ತಿಯಾಗುಳ್ಳ ಹೃದಯ ಮನಸ್ಸುಗಳನ್ನು ಮಾನವ ವಿಮುಖಗೊಳಿಸಿದಷ್ಟೂ ಆತನ ವಿಚಾರಶಕ್ತಿಯೂ ಕುಂದುತ್ತಾ ಸಾಗಿ ಚರ್ಯೆಗಳೂ ವಕ್ರಗತಿಯನ್ನು ಹಿಡಿಯುವುದು. ಇಂಥ ವಿದ್ಯಮಾನದಲ್ಲಿ ಮಾನವ 'ಹಿಂಡಿ'ನ ಮುಂದಿಯಾಗಿ ವಿಕಸಿಸುತ್ತಿರುವುದು ವಿಚಿತ್ರ! ವಿಷಾದನೀಯ! ಅಂದರೆ ಪ್ರಕೃತಿಗೆ ಆತುಕೊಳ್ಳದೆ ಮಾನವನಿಗೆ ಅನ್ಯಮಾರ್ಗವಿದೆಯೆ? ಈ ಮಾರ್ಗ ಆಧುನಿಕ ವಿಚಾರ ಧಾರೆಗೆ ಜೊಳ್ಳು ಎಂದು ಕಂಡುಬಂದಲ್ಲಿ 'ಕಾಲಾಯ ತಸ್ಮೈ ನಮಃ'ವೇ ಅಂತಿಮ ಪರಿಹಾರ.

---

# ವೇದ ಪ್ರತಿಪಾದಿತ ದಾಂಪತ್ಯ ಪ್ರೇಮ

ಹಿಂದೀ ಮೂಲ; **ಶ್ರೀ ಜಗದೀಶ ವಿದ್ಯಾರ್ಥೀ.**

ಕನ್ನಡಕ್ಕೆ: **ಶ್ರೀ ಗುಂಡ್ಮಿ ಚಂದ್ರಶೇಖರ ಐತಾಳ.**

ವೇದಪ್ರಣೀತ ದಾಂಪತ್ಯ ಪ್ರೇಮದ ಆದರ್ಶ ಬಹಳ ಉಚ್ಚವೂ, ಮಹತ್ವಪೂರ್ಣವೂ ಆಗಿದೆ. ಕೆಲವು ಮಂತ್ರಗಳನ್ನು ಅಧ್ಯಯನ ಮಾಡಿ ಅವುಗಳನ್ನು ನಿಮ್ಮ ಜೀವನದ ಅಂಗವನ್ನಾಗಿ ಮಾಡಲು ಪ್ರಯತ್ನಿಸಿರಿ.

> ಅಕ್ಷ್ಯೌ ನೌ ಮಧು ಸಂಕಾಶೇ ಅನೀಕಂ ನೌ ಸಮಂಜನಮ್ ।
> ಅಂತಃ ಕೃಣುಷ್ವ ಮಾಂ ಹೃದಿ ಮನ ಇನ್ನೌ ಸಹಾಸತಿ ॥ (ಅಥರ್ವ: ೭–೩೬–೧)

ನಾವಿಬ್ಬರೂ ಪತಿಪತ್ನಿಯರ ಕಣ್ಣುಗಳು ಮಧುರಮಧುವಿನಂತೆ ಪ್ರೇಮಮಯ ಅಮೃತದಂತೆ ಸಿಂಚಿತಗೊಳ್ಳಲಿ. ನಮ್ಮಿಬ್ಬರ ಜೀವನ ಪರಸ್ಪರ ನಿಸ್ಸಂಕೋಚ ವ್ಯವಹಾರದಿಂದ ಕೂಡಿರಲಿ. ಪ್ರಿಯತಮ! ಪ್ರಿಯತಮೆ! ನೀನು ನನ್ನನ್ನು ನಿನ್ನ ಹೃದಯದಲ್ಲಿಟ್ಟುಕೋ. ನಮ್ಮಿಬ್ಬರ ಮನಸ್ಸು ಸದಾ ಒಂದಾಗಿರಲಿ.

ಇಹೇಮಾವಿಂದ್ರ ಸಂ ನುದ ಚಕ್ರವಾಕೇವ ದಂಪತೀ ।
ಪ್ರಜಯೈನೌ ಸ್ವಸ್ತಕೌ ವಿಶ್ವಮಾಯುರ್ವ್ಯಶ್ನುತಾಮ್ ॥ (ಅಥರ್ವ: ೧೪-೨-೬೪)

ಪ್ರಭೂ! ಪತಿಪತ್ನಿಯರ ಈ ಜೋಡಿಯನ್ನು ಚಕ್ರವಾಕ ಪಕ್ಷಿಯ ಜೋಡಿಯಂತೆ ಈ ಜಗತ್ತಿನಲ್ಲಿ ಬದುಕಲು ಪ್ರೇರೇಪಿಸು. ಇವರಿಬ್ಬರೂ ಉತ್ತಮ ಗೃಹದಲ್ಲಿ ವಾಸಿಸಿ ತಮ್ಮ ಸಂತಾನದೊಂದಿಗೆ ಸಮಸ್ತ ಆಯುರ್ಮಾನವನ್ನು ನಾನಾ ಪ್ರಕಾರವಾಗಿ ಭೋಗಿಸಲಿ.

ಯಥಾ ವೃಕ್ಷಂ ಲಿಬುಜಾ ಸಮಂತಂ ಪರಿಷಸ್ವಜೇ ।
ಏವಾ ಪರಿಷ್ವಜಸ್ವ ಮಾಂ ಯಥಾ ಮಾಂ ಕಾಮಿನ್ಯಸೋ ಯಥಾ ಮನ್ನಾಪಗಾ ಅಸಃ॥
(ಅಥರ್ವ: ೬-೮-೧)

ಲತೆಯು ವೃಕ್ಷವನ್ನು ಸರ್ವದಿಕ್ಕುಗಳಿಂದಲೂ ಹಬ್ಬಿಕೊಂಡು ಅದನ್ನೇ ಆಶಿಸುವಂತೆ ಸ್ತ್ರೀ ! ನೀನು ನನ್ನನ್ನು ಪ್ರೇಮದಿಂದ ಆಲಿಂಗಿಸಿ ನನ್ನ ಆಶ್ರಯವನ್ನು ಹೊಂದು. ನಿನ್ನನ್ನು ನಾನು ಅನನ್ಯ ಚಿತ್ತದಿಂದ ಬಯಸುವಂತೆ ನೀನು ನನ್ನೊಡನೆ ವ್ಯವಹರಿಸು. ನೀನು ನನ್ನನ್ನು ದೂರ ಬಿಟ್ಟು ಹೋಗದಂತೆ ಆಚರಿಸು.

ಮಮತ್ವಾ ದೋಷಣಿ ಶ್ರಿಷಂ ಕೃಣೋಮಿ ಹೃದಯಶ್ರಿಷಂ ।
ಯಥಾ ಮಮ ಕ್ರತಾವಸೋ ಮಮಚಿತ್ತಮುಪಾಯಸಿ ॥ (ಅಥರ್ವ: ೬-೯-೨)

ಪ್ರಿಯತಮೆ ! ಹೃದಯವಾಸಿಯಾದ ನಿನ್ನನ್ನು ನಾನು ನನ್ನ ತೋಳುಗಳಿಂದ ತಬ್ಬಿಕೊಳ್ಳುವೆ. ಆದರಿಂದ ನೀನು ನನ್ನ ಹೃದಯದ ಹಂಬಲದ ನಡುವೆ ಇರುತ್ತೀಯೋ; ಹಾಗೆಯೇ ನನ್ನ ಚಿತ್ತದಲ್ಲಿ ವಾಸಿಸುವೆ.

ಆಹಂ ಖಿದಾಮಿ ತೇ ಮನೋ ರಾಜಾಶ್ವಃ ಪೃಷ್ಟ್ಯಾಮಿವ ।
ರೇಷ್ಮಚ್ಛಿನ್ನಂ ಯಥಾ ತೃಣಂ ಮಯಿ ತೇ ವೇಷ್ಟತಾಂ ಮನಃ ॥
(ಅಥರ್ವ: ೬-೧೦೨-೨)

ಸ್ತ್ರೀಪುರುಷರು ಪರಸ್ಪರ ಪ್ರೀತಿಸಲಿ, ಅಲ್ಲದೆ ಪ್ರಾರ್ಥಿಸಿಕೊಳ್ಳಲಿ; ಪ್ರಿಯತಮೆ ! ಹಿಂದಕ್ಕೆ ಕಟ್ಟಿದ ಗಾಡಿಯನ್ನು ಕುದುರೆ ಎಳೆಯುವ ಹಾಗೆ ನಾನು ನಿನ್ನ ಚಿತ್ತವನ್ನು ಸೆಳೆಯುವೆ. ಪ್ರಚಂಡ ವಾಯುವಿನಿಂದ ಮುರಿದು ಹೋದ ಹುಲ್ಲು ಅದೇ ಹುಲ್ಲಿನ ಮೇಲೆ ಬೀಳುವಂತೆ ನಿನ್ನ ಚಿತ್ತ ನನ್ನಲ್ಲಿ ಮಗ್ನವಾಗಲಿ; ನನ್ನನ್ನು ಅಂಟಿಕೊಂಡೇ ಇರಲಿ.

ಇವು ದಾಂಪತ್ಯ ಪ್ರೇಮದ ಎಂಥ ಉದಾತ್ತ ಭಾವನೆಗಳು! ವೈದಿಕ ಧರ್ಮದಲ್ಲಿ ಪತಿಪತ್ನಿಯರ ಸಂಬಂಧ ಅವಿಚ್ಛಿನ್ನವಾಗಿದೆ. ವೈದಿಕ ಧರ್ಮದಲ್ಲಿ ವಿವಾಹ ವಿಚ್ಛೇದದ ಮಾತೇ ಬರುವುದಿಲ್ಲ. ನಾವು ಅನ್ಯ ಮತಗಳನ್ನೂ, ಸಂಪ್ರದಾಯಗಳನ್ನೂ ಅಧ್ಯಯನ ಮಾಡಿದರೆ ಅಲ್ಲಿ ನಮಗೆ ಈ ಉದಾತ್ತ ಭಾವನೆಗಳ ಅಭಾವ ಎದ್ದು ಕಾಣುತ್ತದೆ. ಇಂಗ್ಲೆಂಡ್ ಮೊದಲಾದ ಪಾಶ್ಚಾತ್ಯ ದೇಶಗಳಲ್ಲಿ ಜೀವನದಲ್ಲಿ ಹತ್ತಿಪ್ಪತ್ತು ಬಾರಿ ವಿವಾಹ ವಿಚ್ಛೇದ ಆಗುತ್ತಿರುತ್ತದೆ.

# ವೈದಿಕ ಗೃಹಸ್ಥ

ಯಜ್ಞಂ ದುಹಾನಂ ಸದಮಿತ್ ಪ್ರಪೀಣಮ್ ಪುಮಾಂಸಂ ಧೇನುಂ
ಸದನಂ ರಯೀಣಾಮ್ ।
ಪ್ರಜಾಮೃತತ್ವಮುತ ದೀರ್ಘಮಾಯೂ ರಾಯಶ್ಚ ಪೋಷೈರುಪ ತ್ವಾ ಸದೇಮ ॥
(ಅಥರ್ವ: ೧೧-೧-೩೪)

ನಮ್ಮ ಮನೆ ಹೇಗಿರಬೇಕು? ಅಲ್ಲಿ ಸದಾ ಯಜ್ಞ ನಡೆಯುತ್ತಿರಲಿ. ಅದು ಪುಷ್ಟಿ, ಸಮೃದ್ಧಿಗಳ ಕೇಂದ್ರವಾಗಲಿ. ಪುರುಷರಿಂದ ತುಂಬಿರಲಿ. ಗೋವುಗಳಿರಲಿ. ಐಶ್ವರ್ಯದ ಸದನವಾಗಿರಲಿ. ವಂಶಕ್ಕೆ ಅಮೃತತ್ವವುಂಟಾಗಲಿ. ಅದರ ನಿವಾಸಿಗಳ ಆಯಸ್ಸು ದೀರ್ಘವಾಗಿರಲಿ. ಧನಧಾನ್ಯಗಳ ಸಮೃದ್ಧಿಗಾಗಿ ಭಗವಂತನ ಆರಾಧನೆ ಸದಾ ನಡೆಯಲಿ.

ಒಂದೇ ಒಂದು ಮಂತ್ರದಲ್ಲಿ ಗೃಹಸ್ಥನ ಎಂಥ ಸುಂದರ ಚಿತ್ರಣವನ್ನು ಕೊಡಲಾಗಿದೆ! ಒಬ್ಬ ಸಫಲ ಗೃಹಸ್ಥನಿಗೆ ಏನೇನು ಆವಶ್ಯಕತೆಗಳಿವೆಯೋ ಅವೆಲ್ಲವೂ ಈ ಮಂತ್ರದಲ್ಲಿ ಅಂತರ್ಗತವಾಗಿವೆ. ಈಗ ಇನ್ನೂ ಕೆಲವು ಮಂತ್ರಗಳನ್ನೂ ನೋಡಿರಿ.

ಇಮೇ ಗೃಹಾ ಮಯೋ ಭುವ ಊರ್ಜಸ್ವಂತಃ ಪಯಸ್ವಂತಃ ।
ಪೂರ್ಣಾ ವಾಮೇನ ತಿಷ್ಠಂತಸ್ತೇ ನೋ ಜಾನಾಂತ್ವಾಯತಃ ।
(ಅಥರ್ವ: ೭-೬೦-೨)

ಈ ನಮ್ಮ ಮನೆ ಆನಂದವನ್ನುಂಟು ಮಾಡುವ ಪರಾಕ್ರಮಿ ಪುರುಷರಿಂದ ಪೂರ್ಣವಾಗಿಯೂ, ಜಲ, ಹಾಲು, ತುಪ್ಪಗಳಿಂದ ಸಮೃದ್ಧವಾಗಿಯೂ ನ್ಯಾಯೋಪಾರ್ಜಿತ ಧನದಿಂದ ತುಂಬಿರಲಿ. ಗೃಹಸ್ಥರು ಬಂದು ಹೋಗುವ ಅತಿಥಿಗಳನ್ನು ಅರಿತು ಕೊಳ್ಳಲಿ. ಅರ್ಥಾತ್ ಅನ್ನ ಧನ ಧಾನ್ಯ ಸುಖ ಸಾಧನಗಳಿಂದ ತುಂಬಿದ ಮನೆಗೆ ಅತಿಥಿಗಳು ಸದಾ ಬಂದು ಆ ಗೃಹಸ್ಥನಿಂದ ಆದರ ಸತ್ಕಾರಗಳನ್ನು ಪಡೆಯಲಿ.

ಉಪಹೂತಾ ಇಹಗಾವ ಉಪಹೂತಾ ಅಜಾವಯಃ ।
ಅಥೋ ಅನ್ನಸ್ಯ ಕೀಲಾಲ ಉಪಹೂತೋ ಗೃಹೇಷು ನಃ ॥ (ಅಥರ್ವ: ೭-೬೦-೫)

ನಮ್ಮ ಮನೆ ಹೇಗಿರಬೇಕು? ಗೋವುಗಳಿರಬೇಕು; ಅಲ್ಲಿ ಆಡು ಕುರಿಗಳಿರಬೇಕು. ಸಾತ್ವಿಕ ಆಹಾರದ ರಾಶಿ ಬಿದ್ದಿರಬೇಕು. ನಮ್ಮ ಮನೆಯಲ್ಲಿ ಆಹಾರ ಹೇಗಿರಬೇಕು?

ಯಜ್ಞಿಯಂ ಮಧುಮುಸ್ತು ನೋಽನ್ನಮ್ ॥ (ಅಥರ್ವ: ೬-೧೧೬-೧)

ನಮ್ಮ ಆಹಾರ ಯಜ್ಞಕ್ಕೆ ಉಪಯೋಗವಾಗಿ ಮಧುರವೂ, ಬಲಕಾರಕವೂ ಆಗಿರಲಿ. ಸ್ವರ್ಗ ಇಲ್ಲೇ ಇದೆ; ಇಂಥ ಮನೆಯಲ್ಲಿ! ವೇದ ಇಂಥ ಗೃಹಸ್ಥನ ಮನೆಯನ್ನೇ ಸ್ವರ್ಗವೆಂದು ಕರೆಯುತ್ತದೆ.

ಯತ್ರಾ ಸುಹಾರ್ದಃ ಸುಕೃತೋ ಮದಂತಿ ವಿಹಾಯ ರೋಗಂ ತನ್ವಃ ಸ್ವಾಯಾಃ ।
ಅಶ್ಲೋಣಾ ಅಂಗೈರಹ್ರುತಾಃ ಸ್ವರ್ಗೇ ತತ್ರ ಪಶ್ಯೇಮ ಪಿತರೌ ಚ ಪುತ್ರಾನ್ ॥
(ಅಥರ್ವ: ೬-೧೨೦-೩)

ಉತ್ತಮ ಹೃದಯದ ಪುಣ್ಯಶೀಲ ಪುರುಷನು ರೋಗಗಳಿಂದ ಮುಕ್ತನಾಗಿ ಅಂಗಾಂಗಗಳಲ್ಲಿ ಊನಗಳಿಲ್ಲದೆ ಆನಂದದಿಂದ ಬಾಳುತ್ತಿರುತ್ತಾನೆ. ಅಂಥ ಸ್ವರ್ಗ ಲೋಕದಲ್ಲಿ ನಮ್ಮ ತಂದೆ ತಾಯಿ ಮಕ್ಕಳು ಮರಿಗಳು ಆನಂದ ಪ್ರಸನ್ನತೆಗಳಿಂದ ಓಡಾಡುತ್ತಿರುವುದನ್ನು ಕಾಣುತ್ತೇವೆ.

ಇಂಥ ಸ್ವರ್ಗದಲ್ಲಿರಬೇಕೆಂಬ ಸಂದೇಶ ನೀಡುತ್ತಾ ವೇದ ಬೋಧಿಸುತ್ತದೆ.

ಇಹೈವ ಸ್ತಂ ಮಾ ವಿ ಯೌಷ್ಟಂ ವಿಶ್ವಮಾಯುರ್ವ್ಯಶ್ನುತಮ್ ।
ಕ್ರೀಡಂತೌ ಪುತ್ರೈರ್ನಪ್ತೃಭಿರ್ಮೋದಮಾನೌ ಸ್ವಸ್ತಕೌ ॥

(ಅಥರ್ವ: ೧೪-೧-೨೨)

ದಂಪತೀ! ನೀವಿಬ್ಬರೂ ಗೃಹಸ್ಥಾಶ್ರಮದಲ್ಲಿರಿ. ಎಂದೆಂದೂ ಒಬ್ಬರಿಂದ ಒಬ್ಬರು ಬೇರೆಯಾಗದಿರಿ. ಪುತ್ರಪೌತ್ರರೊಡನೆ ಆಡುತ್ತಾ ಆನಂದಿತರೂ, ಪ್ರಸನ್ನರೂ ಆಗಿದ್ದು ಉತ್ತಮ ಗೃಹ ಸಾಮಾಗ್ರಿಗಳಿಂದ ಸಂಪನ್ನರಾಗಿ ನಿಮ್ಮ ಸಂಪೂರ್ಣ ಆಯುಸ್ಸನ್ನು ಭೋಗದಿಂದ ಅನುಭವಿಸಿರಿ.

ಧ್ರುವಾಸಿ ಧ್ರುವೋಽಯಂ ಯಜಮಾನೋಽಸ್ಮಿನ್ನಾಯತನೇ ಪ್ರಜಯಾ ಪಶುಭಿರ್ಭೂಯಾತ್ ।
ಘೃತೇನ ದ್ಯಾವಾಪೃಥಿವೀ ಪೂರ್ಯೇಥಾಮಿಂದ್ರಸ್ಯ ಛದಿರಸಿ ವಿಶ್ವಜನಸ್ಯ ಛಾಯಾ ।

(ಯಜುರ್ವೇದ: ೫-೨೮)

ಗೃಹಪತ್ನೀ! ನೀನು ಈ ಗೃಹಸ್ಥನಲ್ಲಿ ನಿಶ್ಚಲಳೂ, ಸ್ಥಿರಳೂ ಆಗಿರುವ ಹಾಗೇ ನಿನ್ನ ಯಜಮಾನನಾದ ಪತಿಯೂ ಈ ಮನೆಯಲ್ಲಿ ಸಂಪನ್ನ ಸಮೃದ್ಧನಾಗಿರಲಿ. ನೀವಿಬ್ಬರೂ ಯಜ್ಞದ ಮೂಲಕ ಘೃತಾರ್ಪಿತ ಮಾಡಿ ಆತ್ಮ ಸ್ನೇಹದಿಂದ ಆಕಾಶ ಭೂಮಿಗಳನ್ನು ತುಂಬಿ ಆಪ್ಲಾವಿತ ಗೊಳಿಸಿರಿ, ಸದ್ಗೃಹಸ್ಥ! ನೀನು ಆತ್ಮರಕ್ಷಕ; ಮಾನವರನ್ನು ದುಃಖ ಕಷ್ಟಗಳಿಂದ ರಕ್ಷಿಸುವವನು. ನೀನು ಪ್ರಪಂಚದ ಜನರಿಗೆ ಆಶ್ರಯದಾತನಾಗಿರುವೆ.

ಮೇಲೆ ಉದ್ಧೃತವಾದ ಅನೇಕ ಮಂತ್ರಗಳಲ್ಲಿ ಗೃಹಸ್ಥನ ಎಂಥ ಮನೋಹರ ವರ್ಣನೆ ಅಡಗಿದೆ! ದೇವರೇ! ನಮ್ಮೆಲ್ಲ ಗೃಹಸ್ಥರನ್ನೂ ವೈದಿಕ ಗೃಹಸ್ಥರನ್ನಾಗಿಸಲು ನಮಗೆ ಶಕ್ತಿ ಕೊಡು, ಬಲ ನೀಡು.

## ೨೬. ನಾರೀಗೌರವ

ಶ್ರೀ ಶಂಕರಾಚಾರ್ಯರೊಡನೆ ಕೇಳಿದರು; **'ದ್ವಾರಂ ಕಿಮೇಕಂ ನರಕಸ್ಯ?'** ನರಕದ ದ್ವಾರ ಯಾವುದು? ಅವರು **'ನಾರೀ'** ಎಂದು ಉತ್ತರವಿತ್ತರು. ಪುನಃ ಕೇಳಿದರು: **'ವಿಶ್ವಾಸಪಾತ್ರಂ ನ ಕಿಮಸ್ತಿ?'** -ವಿಶ್ವಾಸಕ್ಕೆ ಯಾರು ಯೋಗ್ಯರಲ್ಲ? ಅವರ ಉತ್ತರ **'ನಾರೀ'** ಎಂದಾಗಿತ್ತು. ಇನ್ನೊಂದು ಪ್ರಶ್ನೆ **'ಕಿಂತದ್ವಿಷಂ ಭಾತಿ ಸುಧೋಪಮಮ್?'**-ಅಮೃತದಂತೆ ಕಂಡುಬರುವ ವಿಷ ಯಾವುದು? ಅವರ ಉತ್ತರ **'ಸ್ತ್ರೀ'** ಎಂದಾಗಿತ್ತು. ಇದು ಶಂಕರಾಚಾರ್ಯರು ಮಾತೃಶಕ್ತಿಯ ಬಗೆಗೆ ಮಾಡಿದ ವಿಚಾರ.

ಗೋಸ್ವಾಮೀ ತುಲಸೀದಾಸರು ಹೇಳಿದ್ದಾರೆ:

**ಢೋಲ್ ಗಂವಾರ್ ಸೂದ್ರ ಪಸು ನಾರೀ ।**
**ಯೇ ಸಬ್ ತಾಡನ ಕೇ ಅಧಿಕಾರೀ ॥**

ಕಬೀರದಾಸನೂ ಬರೆದಿದ್ದಾನೆ:

**ನಾರೀ ಕೀ ಝಾಯೀಂ ಪಡ್ಕೈ ಅಂಧಾ ಹೋತ ಭುಜಂಗ ।**
**ಕಬೀರಾ ತಿನಕೀ ಕೌನ್‌ಗತಿ ನಿತ ನಾರೀ ಕೇ ಸಂಗ ॥**

ಕ್ರಿಶ್ಚಿಯನರು ಸ್ತ್ರೀಯರಲ್ಲಿ ಆತ್ಮವೇ ಇಲ್ಲವೆಂದು ಹೇಳುತ್ತಾರೆ. ಹದಿನೆಂಟನೆಯ ಶತಮಾನದಲ್ಲಿ ಅವರ ಮಾನ್ಯತೆಯಲ್ಲಿ ಪರಿವರ್ತನೆಯಾಯಿತು. ಕುರಾನಿನಲ್ಲಿ ಸ್ತ್ರೀಯರ ಬಗೆಗೆ ಹೀಗೆ ಬರೆದಿದೆ: "ಅವರು ನಿಮ್ಮ ಹೊಲಗಳು; ಹೇಗೆ ಬೇಕಾದರೂ ಹೋಗಿ."

ಇವು ನಾರಿಯರ ಬಗೆಗೆ ವಿಭಿನ್ನ ವ್ಯಕ್ತಿಗಳ, ಮತಗಳ, ಪಂಥಗಳ ವಿಚಾರ. ಈಗ ನೀವು ನಾರಿಯರ ವಿಚಾರದಲ್ಲಿ, ಮಾತೃಶಕ್ತಿಯ ವಿಚಾರದಲ್ಲಿ ವೇದಗಳ ಅಭಿಪ್ರಾಯವನ್ನು ಕೇಳಿರಿ:

**ಅದಿತ್ಯೈ ರಾಸ್ನಾ ಸೀಂದ್ರಾಣ್ಯಾ ಉಷ್ಣೀಷಃ ।**
**ಪೂಷಾಸಿ ಘರ್ಮಾಯ ದೀಷ್ವ ॥** (ಯಜುರ್ವೇದ: ೩೮-೩)

ಸ್ತ್ರೀ! ನೀನು ಪೃಥ್ವಿಯ ಕಡಿವಾಣವಾಗಿರುವೆ. ಗೃಹಸ್ಥನ ಶಿರೋವೇಷ್ಟನವಾಗಿರುವೆ. ಭೂಮಿಯಂತೆ ಪೋಷಕಳಾಗಿರುವೆ. ನೀನು ಗೃಹಯಜ್ಞದಲ್ಲಿ ಮನೋಯೋಗವನ್ನುಂಟುಮಾಡು.

ನಾರೀಜಾತಿಯ ಬಗೆಗೆ ಎಂಥ ಉಚ್ಚವೂ, ಭವ್ಯವೂ ಆದ ಭಾವಗಳಾಗಿವೆ! ಅಲ್ಲದೆ ನೋಡಿರಿ:

**ಧ್ರುವಾಸಿ ಧರುಣೇತೋ ಜಜ್ಞೇ ಪ್ರಥಮಮೇಭ್ಯೋ ಯೋನಿಭ್ಯ ಅಧಿ ಜಾತವೇದಾಃ ॥** (ಯಜುರ್ವೇದ: ೧೩-೩೪)

ಸ್ತ್ರೀ! ನೀನು ಸ್ಥಿರವಾಗಿರುವವಳು. ನೀನು ಗೃಹಸ್ಥನ ಆಧಾರ. ಈ ಪುರುಷನು ಪ್ರಪ್ರಥಮವಾಗಿ ಈ ಮಾತೆಯಲ್ಲಿಯೇ ಉತ್ಪನ್ನನಾಗುತ್ತಾನೆ. ಬಳಿಕ ಉತ್ಕೃಷ್ಟ ಜ್ಞಾನಿಯಾಗಿ ಈ ಗುರು ಮೊದಲಾದ ಆಶ್ರಯಸ್ಥಾನಗಳಲ್ಲಿ ಉತ್ಪನ್ನನಾಗುತ್ತಾನೆ.

**ಇಡೇ ರಂತೇ ಹವ್ಯೇ ಚಂದ್ರೇ ಜ್ಯೋತೇಽದಿತೇ ಸರಸ್ವತಿ ಮಹಿ ವಿಶ್ರುತಿ ।**
**ಏತಾ ತೇ ಅಘ್ನ್ಯೇ ನಾಮಾನಿ ದೇವೇಭ್ಯೋ ಮಾ ಸುಕೃತಂ ಬ್ರೂತಾತ್॥**
(ಯಜುರ್ವೇದ: ೮-೪೩)

ಅಘ್ನ್ಯೇ! ಇಡೇ—ಪ್ರಶಂಸನೀಯ ಗುಣಯುಕ್ತಳು, ರಂತೇ—ರಮಣಿಯಾಗಲು ಯೋಗ್ಯಳು, ಹವ್ಯೇ—ಸ್ವೀಕರಿಸಲು ಯೋಗ್ಯಳು, ಕಾಮ್ಯೇ-ಬಯಸಲು ಯೋಗ್ಯಳು, ಜ್ಯೋತೇ—ಶ್ರೇಷ್ಠ ಶೀಲದಿಂದ ಪ್ರಕಾಶಮಾನಳು, ಚಂದ್ರೇ—ಚಂದ್ರನಂತೆ ಆನಂದ ನೀಡುವವಳು, ಅದಿತೇ—ಅಖಂಡ ಚರಿತ್ರೆಯಿಂದ ಕೂಡಿದವಳು, ಸರಸ್ವತಿ—ಪ್ರಸಿದ್ಧ ವಿಜ್ಞಾನದಿಂದ ಯುಕ್ತಳಾದವಳು, ಮಹಿ—ಪೂಜನೀಯಳು, ವಿಶ್ರುತಿ—ವಿವಿಧ ಗುಣಗಳಿಂದ ಪ್ರಸಿದ್ಧಳು—ಮೊದಲಾದ ಈ

ನಿನ್ನ ಹೆಸರುಗಳನ್ನು ಎಂದೂ ಖಂಡಿಸುವುದು ಸಾಧ್ಯವಿಲ್ಲ. ಹೀಗೆ ಉಕ್ತಗುಣಯುಕ್ತೆಯಾದ ಸ್ತ್ರೀ! ನೀನು ಉತ್ತಮ ಗುಣಗಳನ್ನು ಪತಿಯಾದ ನನಗೆ ಉಪದೇಶಿಸು.

ತುಲಸೀದಾಸರು ಸ್ತ್ರೀಯನ್ನು ದಂಡನಾರ್ಹ ಅಧಿಕಾರಿ ಎಂದರೆ ವೇದ ಅವಳನ್ನು ಅಘ್ನ್ಯಾ—ಎಂದೂ ದಂಡನಾರ್ಹಳಲ್ಲ ಎಂದೂ ಪ್ರಶಂಸಿಸುತ್ತದೆ. ಇಷ್ಟೇ ಅಲ್ಲ; ಪತ್ನಿಯಾದವಳು ಪತಿಗೆ ಉತ್ತಮ ಗುಣಗಳನ್ನು ಉಪದೇಶಿಸಲಿ ಎಂದೂ ಹೇಳುತ್ತದೆ. ವೇದದ ದೃಷ್ಟಿಯಲ್ಲಿ ನಾರಿಯ ಗೌರವ ಎಷ್ಟು ಉದಾತ್ತವಾಗಿದೆ!

ಈಗ ನಾರಿಯರ ಹೃದಯಭಾವಗಳನ್ನೂ ಸ್ವಲ್ಪ ಅವಲೋಕಿಸಿರಿ;

ಅಹಂ ಕೇತುರಹಂ ಮೂರ್ಧಾಹಮುಗ್ರಾ ವಿವಾಚನೀ ।
ಮಮೇದನು ಕ್ರತುಂ ಪತಿಃ ಸೇಹಾನಾಯಾ ಉಪಾಚರೇತ್ ॥
(ಋಗ್ವೇದ: ೧೦–೧೫೯–೨)

ನಾನು ಧ್ವಜದಂತೆ ಎಲ್ಲವನ್ನೂ ಹೇಳಿಬಿಡುವವಳು. ನಾನು ಗೃಹಸ್ಥನ ಮೊದಲಾಗಿದ್ದೇನೆ. ನಾನು ತುಂಬ ಬಲಶಾಲಿನಿಯೂ, ವ್ಯಾಖ್ಯಾನ ಕಲಾವಿದಳೂ ಆಗಿದ್ದೇನೆ. ವಿರೋಧಿಗಳನ್ನು ಪರಾಭವಗೊಳಿಸುವಂಥ ನನ್ನ ಬುದ್ಧಿಗೆ ಅನುಸಾರವಾಗಿ ನನ್ನ ಪತಿ ಆಚರಿಸುತ್ತಾನೆ.

ಮಮ ಪುತ್ರಾಃ ಶತ್ರುಹಣೋಽಥೋ ಮೇ ದುಹಿತಾ ವಿರಾಟ್ ।
ಉತಾಹಮಸ್ಮಿ ಸಂಜಯಾ ಪತ್ಯೌ ಮೇ ಶ್ಲೋಕ ಉತ್ತಮಃ ॥
(ಋಗ್ವೇದ: ೧೦–೧೫೯–೩)

ನನ್ನ ಪುತ್ರರು ಶತ್ರುಗಳನ್ನು ನಾಶಮಾಡಬಲ್ಲವರಾಗಿದ್ದಾರೆ. ನನ್ನ ಕನ್ಯೆ ತೇಜಸ್ವಿನಿಯಾಗಿದ್ದಾಳೆ. ನಾನು ಸ್ವತಃ ವಿಜಯಶಾಲಿನಿಯಾಗಿದ್ದೇನೆ. ನನ್ನ ಪತಿಯೂ ಸರ್ವಶ್ರೇಷ್ಠ ಶತ್ರುವನ್ನು ಪರಾಭವಗೊಳಿಸಿ ಯಶಸ್ವಿಯಾಗಿದ್ದಾನೆ.

ಸ್ತ್ರೀಯರ ವ್ಯವಹಾರ ಹೇಗಿರಬೇಕು?

ಅಘೋರ ಚಕ್ಷುರಪತಿಘ್ನ್ಯೇಧಿ ಶಿವಾ ಪಶುಭ್ಯಃ ಸುಮನಾಃ ಸುವರ್ಚಾಃ ।
ವೀರಸೂರ್ದೇವೃಕಾಮಾ ಸ್ಯೋನಾ ಶಂ ನೋ ಭವ ದ್ವಿಪದೇ ಶಂ ಚತುಷ್ಪದೇ ॥
(ಋಗ್ವೇದ: ೧೦–೮೫–೪೪)

ಸ್ತ್ರೀ! ನೀನು ಸೌಮ್ಯದೃಷ್ಟಿಯವಳೂ, ಪತಿಗೆ ಕಷ್ಟ ಕೊಡದವಳೂ ಆಗಿರು. ನೀನು ಪಶುಗಳಿಗೆ ಕಲ್ಯಾಣಕಾರಿಣಿಯೂ, ಶುಭಮನಸ್ಕಳೂ, ಉತ್ತಮ ಸಂಕಲ್ಪವುಳ್ಳವಳೂ, ಉತ್ತಮ ತೇಜೋವಂತರಾದ ವೀರಪುತ್ರರಿಗೆ ಜನ್ಮವಿತ್ತವಳೂ ನಿನ್ನ ಭಾವಂದಿರನ್ನು ಪ್ರೀತಿಯಿಂದ ಆದರಿಸುವವಳೂ ಆಗಿ ಎಲ್ಲರಿಗೂ ಸುಖಕಾರಿಣಿಯಾಗು. ನೀನು ನಮ್ಮ ಭೃತ್ಯರು, ಪಶುಗಳೇ ಮೊದಲಾದವರಿಗೆ ಶಾಂತಿದಾಯಿನಿಯಾಗು.

ನಾರಿಯರ ನಡತೆ ಹೇಗಿರಬೇಕು?

ಅಧಃ ಪಶ್ಯಸ್ವ ಮೋಪರಿ ಸಂತರಾಂ ಪಾದಕೌ ಹರ ।
ಮಾ ತೇ ಕಶಪ್ಲಕೌ ದೃಶನ್ ಸ್ತ್ರೀ ಹಿ ಬ್ರಹ್ಮಾ ಬಭೂವಿಥ ॥
(ಋಗ್ವೇದ: ೮–೩೩–೧೯)

ಸ್ತ್ರೀ! ನೀನು ಕೆಳಕ್ಕೆ ನೋಡು; ಮೇಲೆ ನೋಡಬೇಡ. ಎರಡೂ ಕಾಲುಗಳನ್ನು ಸರಿಯಾಗಿಟ್ಟುಕೊಂಡು ನಡೆ. ನೋಡಬಾರದ ನಿನ್ನ ಅಂಗಗಳು ಯಾರಿಗೂ ಕಾಣಿಸದಿರಲಿ. ಇಂಥ ವಿನಯಾಚಾರದಿಂದ ನೀನು ಸ್ತ್ರೀಯಾಗಿದ್ದರೂ ವೇದವೇತ್ತಳಾಗಿಯೂ ಪೂಜನೀಯಳೂ ಆಗಬಲ್ಲೆ!

ಇಂದು ಸ್ತ್ರೀಯರು ಈ ಮಂತ್ರವನ್ನು ಮನನಮಾಡಬೇಕಾದ ಆವಶ್ಯಕತೆ ತುಂಬ ಇದೆ. ಇಂದು ನಾರೀ ಎಲ್ಲಿಗೆ ಹೋಗುತ್ತಿದ್ದಾಳೆ? ಅವಳು ಆಚಾರಭ್ರಷ್ಟಳಾಗುತ್ತಿದ್ದಾಳೆ. ನೋಡಬಾರದ ಅವಳ ಅಂಗಗಳು ಇಂದು ಅಂಗಡಿಗಳಲ್ಲಿ ಪ್ರದರ್ಶನಕ್ಕಿಡಲಾಗಿದೆ. ಸಹೋದರಿಯರೇ, ಹಿಂದಿರುಗಿರಿ, ವೇದಗಳ ಕಡೆಗೆ ಮುಖತಿರುಗಿಸಿರಿ.

---

# ಉಪನಿಷತ್ತಿನ ದಿವ್ಯಶಿಕ್ಷಣ

● ಎಸ್. ಕೆ. ಶ್ರೀಪತಿ ಆಚಾರ್ಯ

ಮಾನವ ಚೇತನವು ಸ್ವಭಾವತಃ ಇಂದ್ರಿಯ ಮತ್ತು ಮನಸ್ಸನ್ನು ಅನುಸರಿಸಿಕೊಂಡು ವಿಶ್ವ ಜಗತ್ತಿನ ಪರಿಚಯವನ್ನು ಪಡೆಯುವುದಕ್ಕಾಗಿ ಪ್ರಯತ್ನಿಸುತ್ತದೆ. ಇದರಿಂದ ಮಾನವ ಚೇತನ ಕ್ರಮವಾದ ವಿಕಾಸಶೀಲ ಜ್ಞಾನದ ಮುಂದೆ ಈ ವಿಶ್ವ ಜಗತ್ತು ದೇಶ ಕಾಲಾಧೀನವಾದ ಶಬ್ದ-ಸ್ಪರ್ಶ-ರೂಪ-ರಸ-ಗಂಧ ವಿಶಿಷ್ಟವಾದ ನಿತ್ಯ ಪರಿವರ್ತನಶೀಲ ಅಸಂಖ್ಯ ಖಂಡ ಪದಾರ್ಥಗಳ ಸಮಷ್ಟಿ ರೂಪದಲ್ಲಿ ಪ್ರತೀತವಾಗುತ್ತದೆ. ಆದರೆ ಮಾನವ ಚೇತನದ ಅಂತಃ ಪ್ರವೃತ್ತಿಯಲ್ಲಿ ಯಾವೊಂದು ಪ್ರೇರಣೆಯಿದೆಯೋ ಅದರಿಂದಾಗಿ, ವಿಶ್ವ ಜಗತ್ತಿನ ಬಾಹ್ಯ ಪರಿಚಯದಿಂದಾಗಿ ಅದಕ್ಕೆ ತೃಪ್ತಿ ಉಂಟಾಗುವುದಿಲ್ಲ. ಇಂದ್ರಿಯ ಸಮೂಹ ಮತ್ತು ಮನಸ್ಸು ಈ ಜಗತ್ತಿನ ಯಾವ ಪರಿಚಯವನ್ನು ಮಾನವ ಚೈತನ್ಯದ ಮುಂದಿರಿಸುತ್ತದೋ ಅದು ನಿಜವಾದ ಅದರ ಪರಿಚಯವಲ್ಲ—ಮತ್ತು ಅದರ ಯಥಾರ್ಥ ಸ್ವರೂಪದ ಜ್ಞಾನವೂ ಅಲ್ಲ. ಈ ತೆರನಾದ ಅನುಭೂತಿಯು ಮಾನವ ಚೇತನವನ್ನು ಸದಾ-ಸರ್ವದಾ ಈ ಪ್ರಪಂಚದ ಮತ್ತೂ ನಿಗೂಢ-ನಿಗೂಢತರ ಮತ್ತೂ ನಿಗೂಢತಮವಾದ ಜ್ಞಾನವನ್ನು ಪಡೆಯಲಿಕ್ಕಾಗಿ ಉದ್ದೀಪನಗೊಳಿಸುತ್ತದೆ. ಜಗತ್ತಿನ ಈ ಬಾಹ್ಯ ಖಂಡ ಪರಿಚಯದ ಮೇಲೆ ನಿರ್ಭರನಾಗಿ ಮನುಷ್ಯ ಕರ್ಮ ಮತ್ತು ಭೋಗಗಳಲ್ಲಿ ಪ್ರವೃತ್ತನಾಗುತ್ತಾನೆ. ಆದರೆ ಈ ರೀತಿಯ ಕರ್ಮ ಮತ್ತು ಭೋಗದಿಂದ ಅವನಿಗೆ ಶಾಂತಿ ದೊರೆಯುವುದಿಲ್ಲ. ಇದರಲ್ಲಿ ಅವನಿಗೆ ನಿರಾಬಾಧವಾದ ಸ್ವಾಧೀನತೆಯ ಅನುಭೂತಿಯಿಲ್ಲ ಮತ್ತೂ ಪೂರ್ಣತೆಯ ಆಸ್ವಾದನವೂ ಇಲ್ಲ. ಈ ಪ್ರಕಾರದಲ್ಲಿ ಜ್ಞಾನ, ಕರ್ಮ ಮತ್ತು ಭೋಗಗಳಲ್ಲಿ ತಾನು ಪೂರ್ಣ ರೂಪದಲ್ಲಿ ಉಪಲಬ್ಧನೆಂದು ತಿಳಿಯಲಾರನು. ಅವನ ಚೇತನದಲ್ಲಿ ಎಲ್ಲಾ ಅವಸ್ಥೆಗಳಲ್ಲಿ ಅಭಾವ ಬೋಧ, ದುಃಖ ಬೋಧ ಮತ್ತು ಅಶಾಂತಿಯ ಜ್ವಾಲೆಯು ಎಡೆಯಾಡುತ್ತಿರುವುದು. ಅವನು ಆಗ ಈ ಅಭಾವ, ದುಃಖ ಮತ್ತು ಅಶಾಂತಿಯನ್ನು ದೂರ ಮಾಡುವುದಕ್ಕಾಗಿ ಉಚ್ಚತರವಾದ ಜ್ಞಾನಭೂಮಿ, ಕರ್ಮಭೂಮಿ ಮತ್ತು ಭೋಗಭೂಮಿಯನ್ನು

ಅನುಸಂಧಾನ ಮಾಡುತ್ತಾನೆ. ವಿಶ್ವ ಜಗತ್ತಿನೊಂದಿಗೆ ನಿಬಿಡತರವಾದ ಪರಿಚಯಕ್ಕಾಗಿ ಆಗ್ರಹಶೀಲನಾಗುತ್ತಾನೆ.

ಇಂದ್ರಿಯ ಮತ್ತು ಮನಸ್ಸನ್ನು ಅನುವರ್ತನ ಮಾಡುವ ಮಾನವ ಚೈತನ್ಯ ಎಷ್ಟೆಷ್ಟು ಅಗ್ರಸರವಾಗುತ್ತದೋ ಅದಕ್ಕೆ ಆಗ ಈ ಮಾರ್ಗದಲ್ಲಿ ಜ್ಞಾನದ, ಕರ್ಮದ ಮತ್ತು ಆನಂದದ ಪರಿಪೂರ್ಣತೆಯಿಲ್ಲವೆನ್ನುವುದರ ಅನುಭವವಾಗುತ್ತದೆ. ಆದರೆ ಈ ಪ್ರಯತ್ನದಿಂದಾಗಿ ಚೇತನದ ಕ್ರಮ-ವಿಕಾಸವು ಆಗುತ್ತಿರುತ್ತದೆ. ಮಾನವ-ಚೇತನವು ಯಾವಾಗ ಪೂರ್ಣ ರೂಪವಾಗಿ ವಿಕಸಿತವಾಗುತ್ತದೋ, ಸಮಷ್ಟಿರೂಪವಾಗಿ ಜಾಗ್ರತ ಮತ್ತು ಪ್ರಬುದ್ಧವಾಗುತ್ತದೋ ಆಗ ಅವನು ತನ್ನ ಜ್ಞಾನ, ಕರ್ಮ ಮತ್ತು ಭೋಗವನ್ನು ಇಂದ್ರಿಯ ಮತ್ತು ಮನಸ್ಸಿನ ಅಧೀನತೆಯಿಂದ ಮುಕ್ತಗೊಳಿಸಲು ಪ್ರಯತ್ನಿಸುತ್ತಾನೆ. ತನ್ನ ಸ್ವರೂಪ ಭೂತವಾದ ಚಿತ್-ಜ್ಯೋತಿಯ ಪ್ರಕಾಶದಿಂದ ಈ ವಿಶ್ವ-ಜಗತ್ತಿನ ಯಥಾರ್ಥ ಸ್ವರೂಪದ ಪ್ರತ್ಯಕ್ಷ ಪರಿಚಯವನ್ನು ಪಡೆಯುವುದಕ್ಕೆ ತನ್ನನ್ನು ಸಂಲಗ್ನಗೊಳಿಸುತ್ತಾನೆ. ಇಂದ್ರಿಯ-ಮನೋ ನಿರಪೇಕ್ಷವಾದ ಎಲ್ಲಾ ಪ್ರಕಾರಗಳಿಂದ ಸಂಬುದ್ಧವಾದ ಮಾನವ-ಚೇತನದ ಅಪರೋಕ್ಷ ಜ್ಞಾನದಲ್ಲಿ ವಿಶ್ವ-ಜಗತ್ತಿನ ಯಾವ ಸ್ವರೂಪವು ಪ್ರತ್ಯಕ್ಷವಾಗುವುದೋ ಅದುವೇ ಈ ವಿಶ್ವ-ಜಗತ್ತಿನ ಪಾರಮಾರ್ಥಿಕ ಸ್ವರೂಪವಾಗಿರುತ್ತದೆ. ಹೀಗೆಂದು ಅವನಿಗೆ ಅನುಭವವಾಗುತ್ತದೆ. ಈ ಜ್ಞಾನದಲ್ಲಿ ಮಾನವ-ಚೇತನ ಮತ್ತು ವಿಶ್ವಜಗತ್ತಿನ ಎಲ್ಲ ಭೇದ, ವ್ಯವಧಾನ ಮತ್ತು ವಿಸಂವಾದಗಳು ಕಳೆದು ಹೋಗುತ್ತದೆ. ಮಾನವ ಚೇತನದ ಅಪೂರ್ಣತೆಯ ಅನುಭೂತಿಯು ಕಳೆಯುತ್ತದೆ, ತನ್ನೊಂದಿಗೆ ಜಗತ್ತಿನ ಏಕಾತ್ಮತೆಯ ಅನುಭವವಾದಂತಾಗಿ ಅದು ತನ್ನ ಖಂಡ, ಅಪೂರ್ಣ ಮತ್ತು ನಿರಾನಂದ ಭಾವದಿಂದ ಮುಕ್ತವಾಗುತ್ತದೆ.

ಈ ಯಾವ ಇಂದ್ರಿಯ-ಮನದ ಅಧೀನತೆಯಿಂದ ಮುಕ್ತವಾದ ಸಮ್ಯಕ್-ಪ್ರಬುದ್ಧವಾದ ಮಾನವ ಚೇತನವೇನಿದೆ, ಇದನ್ನೇ "ಋಷಿ ಚೇತನ" ಎನ್ನುತ್ತಾರೆ. ಈ ಋಷಿ ಚೇತನದ ಮೂಲಕ ವಿಶ್ವ-ಜಗತ್ತಿನ ಅಂತರ್ನಿಹಿತ ತತ್ವಗಳ ಸಂಬಂಧದಲ್ಲಿ ಯಾವ ಅಪರೋಕ್ಷ ಅನುಭವವಿರುತ್ತದೆ. ಅದರ ಹೆಸರೇ ಉಪನಿಷತ್-ಜ್ಞಾನವೆಂದು ಋಷಿ ಚೇತನದಲ್ಲಿ ಯಾವ ಸತ್ಯಪ್ರಕಾಶಿತವಾಗುವುದೋ ಅದುವೇ ಸಂಪೂರ್ಣ ಜೀವ ಮತ್ತು ಜಗತ್ತಿನ ಮೂಲತತ್ವ ಮತ್ತು ಯಥಾರ್ಥ ಸ್ವರೂಪದ್ದಾಗಿರುತ್ತದೆ. ಆ ಋಷಿ ಚೇತನವು ಸಮಸ್ತ ಜೀವ(ಚೇತನ) ಮತ್ತು ಜಡದ ಅಬಾಧ ಮಿಲನ ಕ್ಷೇತ್ರವಾಗಿರುತ್ತದೆ. ಆ ಋಷಿ ಚೇತನದ ಪ್ರಾಪ್ತಿಯಾದ ಮೇಲೆ ಮನುಷ್ಯನ ಜ್ಞಾನ, ಸ್ವಾಧೀನತೆ, ಆನಂದ ಮತ್ತು ಕಲ್ಯಾಣದ ಪರಿಪೂರ್ಣತೆಯುಂಟಾಗುತ್ತದೆ. ಮನುಷ್ಯ ಚೇತನವು ಆ ಕಾಲದಲ್ಲಿ ದೇಶ ಕಾಲಗಳ ಸೀಮೆಯನ್ನು ಉಲ್ಲಂಘಿಸಿ, ಕಾರ್ಯ-ಕಾರಣ ಶೃಂಖಲೆಯಿಂದ ಬಿಡುಗಡೆ ಹೊಂದಿ, ರಾಗ-ದ್ವೇಷ, ಭಯ-ಭಾವನೆಯಿಂದ ಮೇಲೆದ್ದು ಬಂದು ಎಲ್ಲ ತೆರನಾದ ಆವರಣ ಮತ್ತು ವಿಕ್ಷೇಪಗಳಿಂದ ಮುಕ್ತಿಯನ್ನು ಪಡೆದು ವಿಶ್ವ-ಜಗತ್ತಿನ ಯಥಾರ್ಥ ಸ್ವರೂಪವನ್ನು ಕಾಣುತ್ತದೆ ಮತ್ತು ತನ್ನ ಯಥಾರ್ಥ ಸ್ವರೂಪದಲ್ಲಿ ಪ್ರತಿಷ್ಠಿತವಾಗುತ್ತದೆ. ಋಷಿಗಣವು ಯಾವಾಗ ಈ ಅನುಭವದ ವಿಷಯವನ್ನು ತಿಳಿಸುವುದೋ ಆ ಸಮಯದಲ್ಲಿ ಇಂದ್ರಿಯ-ಮನಗಳ ಶೃಂಖಲೆಯಲ್ಲಿ ಬಂಧಿತನಾದ ಜ್ಞಾನ ಪಿಪಾಸುವಾದ ವ್ಯಕ್ತಿಯು ಬಹಳ ಆಶ್ಚರ್ಯದಿಂದ ಅವನ್ನು

ಕೇಳುತ್ತಾನೆ. ಆದರೆ ಆತನು ಬಹಳ ಚೆನ್ನಾಗಿ ಅದರ ನಿರ್ಧಾರವನ್ನು ಮಾಡಲಾರನು. ಈ ವಿಷಯವನ್ನು ಆತನು ಅಸ್ಪಷ್ಟ ಭಾವದಿಂದ ಜ್ಞಾನದ ಆದರ್ಶ ರೂಪದಲ್ಲಿ ಅನುಭವಿಸುವನು ಮತ್ತು ಇಂತಹ ಸ್ಥಿತಿಯನ್ನು ಗಳಿಸಲಿಕ್ಕಾಗಿ ಮತ್ತು ಇಂದ್ರಿಯ–ಮನದ ಅಧೀನತೆಯಿಂದ ಮುಕ್ತನಾಗಲು ಸಾಧನೆ ಮಾಡಬಲ್ಲನು.

ಪ್ರಾಚೀನ ಭಾರತದಲ್ಲಿ ಅಸಾಧಾರಣ ಮಹಾ ಪುರುಷರು ಋಷಿ ಚೇತನವನ್ನು ಹೊಂದಿ ಅತೀಂದ್ರಿಯ ಮತ್ತು ಅತಿಮಾನಸ ಜ್ಞಾನದ ಮೂಲಕ ಜೀವ-ಜಗತ್ತಿನ ಪಾರಮಾರ್ಥಿಕ ಸ್ವರೂಪವನ್ನು ಪ್ರತ್ಯಕ್ಷವಾಗಿ ಕಂಡರೋ ಮತ್ತು ಯಾರ ಸಮ್ಯಕ್ ಸಂಬುದ್ಧ ಚೇತನದ ಮುಂದೆ ಪರಮ ಸತ್ಯವು ಅನಾವೃತ್ತ ಮತ್ತು ಅವಿಕ್ಷಿಪ್ತ ರೂಪದಿಂದ ತನ್ನ ಸತ್ಯವನ್ನು ಪ್ರಕಟಪಡಿಸಿತೋ ಆ ಅವರ ದಿವ್ಯ ವಾಣಿಯೇ ಸಂಕಲಿತ ಮತ್ತು ಸಂಗ್ರಥಿತವಾಗಿ ಉಪನಿಷತ್ ಗ್ರಂಥದ ರೂಪದಿಂದ ಮಾನವ ಸಮಾಜದಲ್ಲಿ ಪ್ರಚಲಿತವಾಯಿತು. ಗುರು–ಶಿಷ್ಯ ಪರಂಪರೆಯ ಕ್ರಮದಿಂದ ಈ ವಾಣಿಯ ಆಶ್ರಯವನ್ನು ಹೊಂದಿ ಜ್ಞಾನ ಪಿಪಾಸು, ಆನಂದ ಪಿಪಾಸು ಮತ್ತು ಮುಕ್ತಿ ಪಿಪಾಸು ಮುಂತಾದ ಅಗಣಿತ ಸಾಧಕರು ತಮ್ಮ ಸ್ವಾಭಾವಿಕ ಜ್ಞಾನಶಕ್ತಿ, ಕರ್ಮಶಕ್ತಿ ಮತ್ತು ಚಿತ್ತ ವೃತ್ತಿಯನ್ನು ಬಹಳ ಚೆನ್ನಾಗಿ ನಿಯಂತ್ರಿಸಿಕೊಂಡು ತಮ್ಮ ಚೇತನಗಳನ್ನು ಇಂದ್ರಿಯ–ಮನಗಳ ಅಧೀನತೆಯಿಂದ ಪಾರು ಮಾಡಿದರು. ಈ ಮುಕ್ತ ಚೇತನಗಳ ಮೂಲಕ ಅವರ ಎಲ್ಲ ದಿವ್ಯವಾಣಿಗನುಸಾರವಾಗಿ ಅಪರೋಕ್ಷ ಅನುಭವವನ್ನು ಪಡೆದು ಅವರು ಕೃತಕೃತ್ಯರಾದರು. ಆ ಸಾಧಕರ ಜೀವನದ ಕೃತಾರ್ಥತೆಯನ್ನು ಮನಗಂಡು ಸಮಾಜದ ಎಲ್ಲಾ ವರ್ಗಗಳ ನರ–ನಾರಿಯರಿಗೂ ಆ ದಿವ್ಯ ವಾಣಿಯ ಸತ್ಯತೆಯ ಸಂಬಂಧವಾಗಿ ಸಂದೇಹರಹಿತವಾದ ದೃಢ ವಿಶ್ವಾಸವುಂಟಾಗಿರುವುದು. ದಾರ್ಶನಿಕ ಆಚಾರ್ಯರುಗಳು ಇಂದ್ರಿಯ–ಮನಗಳ ಅಧೀನತೆಯ ಶೃಂಖಲೆಯಲ್ಲಿ ಬಂಧಿತವಾದ ಪ್ರತ್ಯಕ್ಷಾದಿ ಸರ್ವ ವಿಧವಾದ ಲೌಕಿಕ ಪ್ರಮಾಣಗಳು ಮತ್ತು ತದನುಗತ ಸಮಸ್ತ ಯುಕ್ತಿ ತರ್ಕಗಳನ್ನು ಪರಮತತ್ತ್ವ ಪ್ರಕಾಶನದಲ್ಲಿ ಅಸಮರ್ಥವಾಗಿ ಭಾವಿಸಿ ಜೀವ–ಜಗತ್ತಿನ ಪಾರಮಾರ್ಥಿಕ ಪರಿಚಯವನ್ನು ಪ್ರದಾನಿಸಲು ಉಪನಿಷದ್ವಾಣಿಯನ್ನೇ ಪ್ರಮಾಣವನ್ನಾಗಿ ಭಾವಿಸಿದರು ಮತ್ತು ಈ ಎಲ್ಲಾ ವಾಣಿಗಳ ತಾತ್ಪರ್ಯವನ್ನು ಕಂಡು ಹಿಡಿಯುವುದರಲ್ಲಿ ಅವರು ಪ್ರಧಾನವಾಗಿ ಅವರು ತಮ್ಮ ಬುದ್ಧಿ ಮತ್ತು ವಿಚಾರ ಶಕ್ತಿಯನ್ನು ಬಹಳ ನಿಪುಣತೆಯಿಂದ ಪ್ರಯೋಗಿಸಿದರು. ಸಂಬುದ್ಧ ಚೇತನ ತತ್ತ್ವದರ್ಶಿಗಳಾದ ಋಷಿಗಳ ಅಪರೋಕ್ಷಾನುಭೂತಿಯಿಂದ ಉತ್ಪನ್ನವಾದ ದಿವ್ಯವಾಣಿಯನ್ನು ಶ್ರದ್ಧಾಪೂರ್ವಕವಾಗಿ ಕೇಳುವುದರಿಂದಲೇ ಜೀವ-ಜಗತ್ತಿನ ಯಥಾರ್ಥ ಸ್ವರೂಪದ ಸತ್ಯಜ್ಞಾನ ಪ್ರಾಪ್ತಿಗಾಗಿ ಮನುಷ್ಯನ ಸ್ವಾಭಾವಿಕ ಜ್ಞಾನ ಶಕ್ತಿಯನ್ನು ನಿಯೋಜಿಸಬೇಕಾಗುವುದು. ಈ ಕಾರಣದಿಂದಲೇ ಇದನ್ನು 'ಶ್ರುತಿಪ್ರಮಾಣ'ವೆನ್ನುತ್ತಾರೆ. ಭಾರತದ ಸರ್ವ ಶ್ರೇಷ್ಠ ವಿದ್ವಾಂಸರಿಂದ ರಚಿತವಾದ ಮತ್ತು ಪ್ರಚಾರಗೊಂಡ ಅವೆಷ್ಟು ಸ್ಮೃತಿ, ಪುರಾಣ, ದರ್ಶನ, ತಂತ್ರ ಮತ್ತು ಮಹಾಕಾವ್ಯ ಮುಂತಾದವುಗಳಿವೆಯೋ ಅವೆಲ್ಲವೂ ಈ 'ಶ್ರುತಿ'ಯ ಮೂಲಕವಾಗಿಯೇ ಅನುಪ್ರಾಣಿತವಾಗಿದೆ.

ಈ ಪ್ರಕಾರವಾಗಿ ಋಷಿ ಚೇತನದ ಪ್ರಾಪ್ತಿ, ಅತೀಂದ್ರಿಯ ಮತ್ತು ಅತಿಮಾನಸ ಸತ್ಯದ ಅಪರೋಕ್ಷ ಸಾಕ್ಷಾತ್ಕಾರವು ಕೇವಲ ಪ್ರಾಚೀನ ಭಾರತದ ಕೆಲವು ಅನನ್ಯ ಸಾಧಾರಣ

ಮಹಾಪುರುಷರಿಗೇ ಆಗಿತ್ತು ಎಂದು ಹೇಳುವಂತಿಲ್ಲ. ಎಲ್ಲಾ ಯುಗಗಳು ಮತ್ತು ಎಲ್ಲಾ ದೇಶಗಳಲ್ಲಿ ಅನನ್ಯ ಸತ್ಯ ಪಿಪಾಸು ಪುರುಷರ ಮೂಲಕ ಸತ್ಯದ ಅಪರೋಕ್ಷ ಸಾಕ್ಷಾತ್ಕಾರ ವಾದದ್ದಿದೆ. ಭಾರತದಲ್ಲಿ ಯುಗ-ಯುಗಾಂತರದಿಂದ ಇಂತಹ ಅಸಂಖ್ಯ ಋಷಿಗಳ ಆವಿರ್ಭಾವಾಗುತ್ತಲಿತ್ತು. ಅವರೆಲ್ಲರೂ ತಂತಮ್ಮ ಸತ್ಯಾನುಭವದ ಮೂಲಕ ಉಪನಿಷದ್ವಾಣಿಯ ಯಥಾರ್ಥತೆಯನ್ನು ಸಮರ್ಥನೆ ಮಾಡಿದ್ದರು ಮತ್ತು ಅವುಗಳನ್ನು ವಿಭಿನ್ನಭಾವ ಮತ್ತು ವಿಭಿನ್ನ ಭಾಷೆಗಳಿಂದ ಮಾನವ ಸಮಾಜದಲ್ಲಿ ಪ್ರಚಾರವನ್ನೂ ಮಾಡಿದ್ದರು-ಎಲ್ಲಾ ದೇಶಗಳಲ್ಲಿ ಅಪರೋಕ್ಷ ಜ್ಞಾನ ಸಂಪನ್ನರಾದ ಮಹಾಪುರುಷರು ಈ ರೀತಿ ಮಾಡಿದ್ದರು. ಈ ವಿಶಾಲ ದೇಶದ ಬಹುಮುಖೀ ಸಾಧನೆ ಮತ್ತು ಸಾಧ್ಯತೆಯು ಆ ಋಷಿ ಚೇತನಲಬ್ಧವಾದ ತತ್ತ್ವಾನುಭೂತಿಯ ಮೇಲೆ ಪ್ರತಿಷ್ಠಿತವಾಗಿರುವುದು ಭಾರತೀಯ ಸಂಸ್ಕೃತಿಯ ವೈಶಿಷ್ಟ್ಯವಾಗಿರುತ್ತದೆ. ಭಾರತೀಯ ಸಾಹಿತ್ಯ, ಶಿಕ್ಷಣ, ವಿಜ್ಞಾನ, ದರ್ಶನ ಕುಲ-ಧರ್ಮ, ಜಾತಿ-ಧರ್ಮ, ರಾಷ್ಟ್ರನೀತಿ, ಅರ್ಥನೀತಿ, ವ್ಯವಹಾರನೀತಿ ಇವೆಲ್ಲದರ ನಿರ್ಮಾಣ ಮತ್ತು ಪ್ರಸಾರಗಳು ಉಪನಿಷತ್ತಿನ ಜ್ಞಾನವನ್ನು ಮಾನವ ಜೀವನದ ಪರಮ ಆದರ್ಶ ರೂಪದಲ್ಲಿ ಭಾವಿಸಿ, ಮಾಡಿದವುಗಳಾಗಿವೆ. ಉಪನಿಷತ್ತುಗಳು ಭಾರತೀಯ ಸಂಸ್ಕೃತಿಯ ಪ್ರಾಣಸ್ವರೂಪಗಳಾಗಿವೆ. ಇದರಿಂದಲೇ ಭಾರತೀಯ ಸಂಸ್ಕೃತಿಯು 'ಆರ್ಯ ಸಂಸ್ಕೃತಿ' ಎಂದೆನಿಸಲ್ಪಟ್ಟಿರುತ್ತದೆ. ಸಮಸ್ತ ವೇದಗಳ ಯಾವ ಚರಮ ಸತ್ಯವಿದೆ ಅದುವೇ ಉಪನಿಷತ್ತುಗಳಲ್ಲಿ ಸಮುಜ್ವಲರೂಪದಲ್ಲಿ ಪ್ರಕಟವಾಗಿರುತ್ತದೆ. ಆದುದರಿಂದಲೇ ಉಪನಿಷತ್ತಿನ ಪ್ರಸಿದ್ಧವಾದ ಹೆಸರು ವೇದಾಂತ (ವೇದ ಯಾ ಜ್ಞಾನದ ಅಂತ ಅಥವಾ ಶಿರೋ ಭಾಗ) ಎಂದಾಗಿರುತ್ತದೆ. ಅಂತೆಯೇ ವೇದಾಂತವೇ ಎಲ್ಲಾ ರೀತಿಯ ಭಾರತೀಯ ಸಾಧನೆಗಳ ಭಿತ್ತಿಯಾಗಿದೆ.

ರಾಗ ದ್ವೇಷಶೂನ್ಯ, ಹಿಂಸಾ-ಭಯ ವಿರಹಿತ, ದೇಹೇಂದ್ರಿಯ-ಮನಗಳಿಂದ ಮುಕ್ತ, ಜಾತ್ಯಾಭಿಮಾನ-ಸಂಪ್ರದಾಯಾಭಿಮಾನ ಮುಂತಾದ ಸಂಕೀರ್ಣತೆಯಿಂದ ಅತೀತವಾಗಿ, ಶುದ್ಧಹೃದಯ, ಶುದ್ಧಬುದ್ಧಿ ಮತ್ತು ಸಮಾಹಿತ ಚಿತ್ತ ಋಷಿಗಳ ಭ್ರಮ-ಪ್ರಮಾದಾದಿಶೂನ್ಯ, ದಿವ್ಯ ಸಹಾನುಭೂತಿಯನ್ನು ಕೇಂದ್ರವನ್ನಾಗಿ ಮಾಡಿಯೇ ಭಾರತೀಯ ಸಂಸ್ಕೃತಿ ಮತ್ತು ಸಭ್ಯತೆಯು ನಿರ್ಮಾಣಗೊಂಡಿರುತ್ತದೆ. ಸಾವಿರಾರು ವರ್ಷಗಳಿಂದ ಎಡೆಬಿಡದೆ ಈ ಔಪನಿಷದ ಜ್ಞಾನವು ಭಾರತೀಯ ಸಾಧನಕ್ಷೇತ್ರದಲ್ಲಿ ಸಮಸ್ತ ನರ-ನಾರಿಯರ ಅಶೇಷ ವಿಚಿತ್ರಮಯ ಜೀವನದಲ್ಲಿ ಸರ್ವ ವಿಧವಾದ ಜಾಗತಿಕ ಜ್ಞಾನ, ಲೌಕಿಕ ಕರ್ಮ ಮತ್ತು ಹೃದಯಗತವಾದ ಭಾವಪ್ರವಾಹವನ್ನು ಆಶ್ಚರ್ಯಕರವಾದ ರೀತಿಯಿಂದ ಉಜ್ಜೀವನಗೊಳಿಸುತ್ತಾ ಬಂದಿರುತ್ತದೆ. ಎಲ್ಲದರಲ್ಲಿಯೂ ಇದರ ಅಭೇದ್ಯ ಶಾಸನವಿದೆ. ಈ ದೇಶದ ರಾಗ-ದ್ವೇಷಾದಿಯುಕ್ತ, ದೇಹೇಂದ್ರಿಯ-ಮನ ಬುದ್ಧಿ-ಹೃದಯದ ಮೇಲೂ ಔಪನಿಷದ ಆದರ್ಶದ ಪ್ರಭಾವವಿದೆ. ಭಾರತೀಯ ಜೀವನದ ಎಲ್ಲಾ ವಿಭಾಗದಲ್ಲೂ ಉಪನಿಷತ್ತು ಚಿರಂಜೀವಿಯಾಗಿದೆ. ತಿಳಿದೋ ತಿಳಿಯದೆಯೋ ಪ್ರತ್ಯೇಕ ನರ-ನಾರಿಯರ ಜೀವನದ ಮೇಲೆ ಇದರ ಅಚಿಂತ್ಯ ಪ್ರಭಾವವಿರುತ್ತದೆ. ಭಾರತದ ಸಂಪೂರ್ಣ ವಾತಾವರಣವೇ ಉಪನಿಷತ್ತಿನ ಜ್ಞಾನಾದರ್ಶದ ಮೂಲಕ ಸಂಜೀವಿತವಾಗಿರುತ್ತದೆ.

ಮೊದಲಾಗಿ ನಮ್ಮ ಇಂದ್ರಿಯ-ಮನದ ಮೂಲಕ ಉಪಲಬ್ಧವಾದ ಜ್ಞಾನವು ಈ ವಿಶ್ವಜಗತ್ತನ್ನು ಅನಂತ ವಿಷಮತೆಯೊಂದಿಗೆ ನೋಡಿರುತ್ತದೆ. ಅದು ವಿಭಿನ್ನ ಸ್ವಭಾವ

ವುಳ್ಳ ಅಸಂಖ್ಯ ಪದಾರ್ಥಗಳ ಸಂಘರ್ಷ ಮತ್ತು ಸಮನ್ವಯದಿಂದಲೇ ಈ ಜಗತ್ತಿನ ಸಂಘಟನೆಯಾಗಿದೆಯೆಂಬುದನ್ನು ತಿಳಿದಿರುತ್ತದೆ. ಇದರಲ್ಲಿ ಇಷ್ಟು ಭೇದಗಳಿವೆ. ಇಷ್ಟು ದ್ವಂದ್ವಗಳಿವೆ, ಕಾರ್ಯ-ಕಾರಣ ಸಂಬಂಧ ಮತ್ತು ನಿಯಮಬದ್ಧತೆಗಳಿವೆ ಎಂಬುದನ್ನೂ ಬಲ್ಲುದು. ಈ ವಿಶ್ವ-ಜಗತ್ತು-ಮೂಲತಃ ಯಾ ತತ್ತ್ವತಃ ಒಂದು. ಒಂದೇ ಆದ ಅಖಂಡ ಅಸತ್ತೆಯು ವಿಭಿನ್ನ ಸತ್ತೆಗಳ ರೂಪದಲ್ಲಿ ಇಂದ್ರಿಯ-ಮನದ ಮುಂದೆ ಪ್ರತೀತವಾಗುತ್ತದೆ. ಇಂದ್ರಿಯ ಮನೋಗೋಚರವಾದ ಎಷ್ಟು ವಿಭಿನ್ನ ಪದಾರ್ಥಗಳಿವೆಯೋ ಅದೊಂದೇ ಅದ್ವಿತೀಯ ನಿತ್ಯ ಸತ್ಯ ನಿರ್ವಿಕಾರ ತತ್ತ್ವದ ವಿಭಿನ್ನರೂಪ ಮತ್ತು ವಿಭಿನ್ನನಾಮಗಳಲ್ಲಿ ಆತ್ಮಪ್ರಕಾಶಗಳಾಗಿವೆ. ಒಂದರಿಂದಲೇ ಎಲ್ಲವೂ ಪ್ರಕಟವಾದವುಗಳು. ಒಂದು ಆಶ್ರಯದಿಂದಲೇ ಎಲ್ಲವುಗಳ ಸ್ಥಿತಿಯಿದೆ. ಒಂದನ್ನುಳಿದು ಎರಡನೆಯದು ಯಾವುದೂ ಒಂದು ಸ್ವತಂತ್ರಪದಾರ್ಥವೇ ಅಲ್ಲ. ಈ ತೆರನಾಗಿ ಸ್ಥಾವರ-ಜಂಗಮ ಎಲ್ಲಾ ಪದಾರ್ಥಗಳಲ್ಲಿಯೂ ನಿತ್ಯ ಸತ್ಯವಾದ ಒಂದು ವಸ್ತು-ತತ್ತ್ವವನ್ನು ಋಷಿ-ಮುನಿಗಳು ಕಾಣುತ್ತಾರೆ.

ಎರಡನೆಯದಾಗಿ ನಮ್ಮ ಜ್ಞಾನದಲ್ಲಿ ಜೀವ ಮತ್ತು ಜಡಗಳ, ಚೇತನ ಮತ್ತು ಅಚೇತನಗಳ ಭೇದವಿದೆ. ನಾವು ಎಂದೂ ಇದನ್ನು ಅತಿಕ್ರಮಿಸಲಾಗುವುದಿಲ್ಲ. ಆದರೆ ಈ ವಿಶ್ವಜಗತ್ ಚೈತನ್ಯಮಯವಾಗಿದೆ ಎಂಬುದು ಋಷಿಗಳ ಅನುಭವ. ಯಾವ ಒಂದು ಅದ್ವಿತೀಯ ಸತ್ ವಸ್ತುವಿನ ಸತ್ತೆಯಿಂದ ವಿಶ್ವ-ಜಗತ್ತು ಸತ್ತೆಯುಳ್ಳದ್ದಾಗಿದೆಯೋ ಅದೇ ಸದ್ವಸ್ತು ಚಿತ್‌ಸ್ವರೂಪವಾಗಿದೆ, ಸ್ವಯಂಪ್ರಕಾಶವಾಗಿದೆ. ಬೇರೆಯದರ ಪ್ರಕಾಶದಿಂದ ಯಾವುದಕ್ಕೆ ಪ್ರಕಾಶವಾಗಿದೆಯೋ, ಎರಡನೆಯದರ ಸಂಬಂಧದಿಂದಲೇ ಯಾವುದರ ಪರಿಚಯವಾಗಿದೆಯೋ ಮತ್ತು ಎರಡನೆಯದರ ಜ್ಞಾನದಲ್ಲಿ ಪ್ರತಿಭಾತವಾದುದರಿಂದ ಯಾವುದಕ್ಕೆ ಸತ್ತೆಯಿದೆಯೋ ಅದನ್ನೇ 'ಜಡ'ವೆನ್ನುತ್ತಾರೆ. ಚೇತನದ ಆಶ್ರಯ ಮತ್ತು ಸತ್ತ್ವದಿಂದಲೇ ಜಡಕ್ಕೆ ಪ್ರಕಾಶ ಮತ್ತು ಸತ್ತ್ವವಿದೆ. ಸಮಸ್ತ ವಿಶ್ವ-ಜಗತ್ತಿನ ಮೂಲದಲ್ಲಿ ಯಾವುದೊಂದು ವಸ್ತುವಿದೆಯೋ ಅದಕ್ಕೆ ಯಾವುದರ ಆಶ್ರಯವಿಲ್ಲ ಮತ್ತು ಪ್ರಕಾಶಕರಿಲ್ಲ. ಯಾವುದು ತನ್ನದೇ ಆದ ಸತ್ತ್ವ ಮತ್ತು ಪ್ರಕಾಶವುಳ್ಳದ್ದಾಗಿ ತನ್ನನ್ನು ವಿಭಿನ್ನತಾಮಯ ವಿಶ್ವಜಗತ್ತಿನ ರೂಪದಲ್ಲಿ ತಾನೇ ಪರಿಚಯಿಸಿಕೊಳ್ಳುವುದೋ ಆ ಅದ್ವಿತೀಯ ತತ್ತ್ವ ನಿಶ್ಚಯವೇ ಸ್ವಪ್ರಕಾಶ ಚೈತನ್ಯಮಯವಾಗಿರುತ್ತದೆ. ಋಷಿ-ಚೇತನವು ಸಂಪೂರ್ಣ ಜಡದಲ್ಲಿ ಆ ಚೈತನ್ಯ ಸ್ವರೂಪನ್ನೇ ನೋಡುತ್ತದೆ. ಚೇತನವೇ ಜಡದ ಯಥಾರ್ಥ ಸ್ವರೂಪವಾಗಿರುತ್ತದೆ. ಇದುವೇ ಉಪನಿಷತ್ತಿನ ಎರಡನೆಯ ಸತ್ಯ.

ಮೂರನೆಯದಾಗಿ ಇಂದ್ರಿಯ-ಮನದ ಅಧೀನತೆಯ ಪಾಶದಲ್ಲಿ ಬಂಧಿಸಲ್ಪಟ್ಟ ನಮ್ಮ ಚೇತನದ ಸಮ್ಮುಖದಲ್ಲಿ ಅಸೀಮ, ಅನಾದಿ ಮತ್ತು ಅನಂತವು ಯಾವಾಗಲೂ ವಾಸ್ತವಿಕ ಸತ್ಯ-ಸ್ವರೂಪದಲ್ಲಿ ಪ್ರತೀತವಾಗುವುದಿಲ್ಲ. ಋಷಿ-ಚೇತನದ ಅತೀಂದ್ರಿಯ, ಅತಿಮಾನಸ ಅನುಭೂತಿಯಲ್ಲಿ ಸಾಧಾರಣ ಜ್ಞಾನದ ಅಸಮರ್ಥತೆಯು ಇರುವುದಿಲ್ಲ. ಈ ಚೇತನದಲ್ಲಿ ದೇಶಕಾಲಾತೀತ ಅಸೀಮ, ಅನಾದಿ, ಅನಂತವಾದ ಒಂದು ಅದ್ವಿತೀಯ ಅಪರಿಣಾಮಿ ತತ್ತ್ವವು ಸಮುಜ್ಜ್ವಲರೂಪದಿಂದ ಪ್ರಕಟಗೊಳ್ಳುತ್ತದೆ. ಅದು ಅಭಾವ ರೂಪದಲ್ಲಿ ಅಲ್ಲ; ಭಾವರೂಪದಲ್ಲಿ. ಜ್ಞಾನಗೋಚರ ವಾಸ್ತವವನ್ನು ನಿಷೇಧ ಮಾಡಿ ಅಲ್ಲ;

ವಾಸ್ತವ ಸಮೂಹವನ್ನು ಕಲ್ಪನೆಯಿಂದ ಸಮಷ್ಟಿಬದ್ಧವಾಗಿ ಮಾಡಿಯೂ ಅಲ್ಲ, ಸರ್ವ ವ್ಯಾಪಿ ಎಲ್ಲದರಲ್ಲಿಯೂ ಅನುಸ್ಯೂತವಾಗಿ, ಎಲ್ಲಾ ಭಾವಗಳಲ್ಲಿ ಲೀಲಾಯಮಾನವಾಗಿ ಸರ್ವಾಂತರಾತ್ಮವಾಗಿ ಒಂದು ಅಖಂಡ ಸ್ವಪ್ರಕಾಶ ವಾಸ್ತವತಾ ಸತ್ಯದರೂಪದಲ್ಲಿ. ಅಸೀಮವೇ ಸಮಸ್ತ ಸಸೀಮದ ಪಾರಮಾರ್ಥಿಕ ತತ್ತ್ವವಾಗಿರುತ್ತದೆ, ಅನಾದಿ ಅನಂತವೇ ಸಂಪೂರ್ಣ ಸಾದಿ-ಸಾಂತದ ತಾತ್ತ್ವಿಕ ಸ್ವರೂಪವು, ದೇಶಕಾಲಾತೀತ ಅಪರಿಣಾಮಿ, ನಿರ್ವಿಕಾರವಾದ ಒಂದು ಅಖಂಡ ಚೈತನ್ಯಮಯ ಪರಮಾತ್ಮನೇ ದೇಶಕಾಲಾಧೀನ, ಪರಿಣಾಮಿ ಉತ್ಪತ್ತಿ-ಸ್ಥಿತಿ–ವಿನಾಶಶೀಲವಾಗಿ ಪ್ರತ್ಯೇಕ ಖಂಡ ಮಾತ್ರದ ಅಂತರದಲ್ಲಿ ವಿಭಿನ್ನ ಮತ್ತು ವಿಚಿತ್ರ ರೂಪದಲ್ಲಿ ಲೀಲಾಮಗ್ನವಾಗಿರುವುದು. ಈ ಅಪರೋಕ್ಷ ಅನು ಭೂತಿಯ ಪ್ರತ್ಯಕ್ಷದರ್ಶನದಿಂದ ಋಷಿಚೇತನವು ಸಂತೃಪ್ತಿ ಪಡೆಯುತ್ತದೆ. ಅವರಿಗೆ ಸಸೀಮದಲ್ಲಿ ಒಂದು ಅಸೀಮ, ಸಾದಿಯಲ್ಲಿ ಅನಾದಿ, ಸಾಂತದಲ್ಲಿ ಅನಂತ ಪರಿಣಾಮ ಮತ್ತು ವಿಕಾರದಲ್ಲಿ ನಿತ್ಯಸತ್ಯ, ಅಪೂರ್ಣದಲ್ಲಿ ನಿತ್ಯಪೂರ್ಣವಾಗಿ ಸರ್ವತ್ರ ಸದಾ ಪ್ರಕಾಶ ಮಾನವಾಗಿ ಕಾಣಬರುವುದು. ಸಸೀಮ—ಅಸೀಮಗಳ ಭೇದ, ಸಾದಿ-ಅನಾದಿ, ಸಾಂತ ಮತ್ತು ಅನಂತಗಳ ಭೇದವು ಈ ದಿವ್ಯಜ್ಞಾನದಲ್ಲಿ–ಔಪನಿಷದ ಜ್ಞಾನದಲ್ಲಿ–ಇಂದ್ರಿಯ ಮತ್ತು ಮನಸ್ಸಿನ ಸ್ತರದಲ್ಲಿ ಇದ್ದುದಾಗಿ ಕಾಣವುದು. ದೇಶ ಕಾಲಾತೀತ ಮತ್ತು ದೇಶ ಕಾಲಾಧೀನ, ಅಸೀಮ, ಅನಂತ ಹಾಗೆಯೇ, ಸಸೀಮ, ಸಾಂತ, ನಿತ್ಯ ಮತ್ತು ಅನಿತ್ಯಗಳ ಆ ಪಾರಾಮಾರ್ಥಿಕ ಐಕ್ಯದರ್ಶನವೇ ಉಪನಿಷತ್ತಿನ ತೃತೀಯ ತತ್ತ್ವವಾಗಿರುತ್ತದೆ.

ಯಾವ ಒಂದು ಕಾಲದಲ್ಲಿ, ಯಾವ ಒಂದು ದೇಶದಲ್ಲಿ ಮತ್ತು ಯಾವುದಾದರೂ ಅವಸ್ಥೆಯಲ್ಲಿ ಯಾವನಾದರೊಬ್ಬ ವ್ಯಕ್ತಿಯು ರಾಗ-ದ್ವೇಷ, ಕುಸಂಸ್ಕಾರಾದಿರಹಿತನಾಗಿ ಉಪಯುಕ್ತ ಸಾಧನಗಳ ಮೂಲಕ ಇಂದ್ರಿಯ-ಮನದ ಅಧೀನತೆಯಿಂದ ತನ್ನನ್ನು ಬಿಡಿಸಿ ಕೊಳ್ಳುವನೋ ಅವನ ವಿಶುದ್ಧ ಚೇತನದ ಸಮ್ಮುಖದಲ್ಲಿ ವಿಶ್ವ-ಜಗತ್ತಿನ ಮತ್ತು ತನ್ನ ಪಾರಮಾರ್ಥಿಕ ಸತ್ಯಸ್ವರೂಪವು ಪ್ರಕಟವಾಗುತ್ತದೆ. ಈ ಸತ್ಯವೇ ಸನಾತನ ಸತ್ಯವು ಮತ್ತು ಈ ಸತ್ಯದೃಷ್ಟಿಯ ಅನುವರ್ತನಕ್ಕಾಗಿ ಮನುಷ್ಯನ ವ್ಯಷ್ಟಿ–ಜೀವನ ಮತ್ತು ಸಮಷ್ಟಿ ಜೀವನದ ಒಳ ಹಾಗೂ ಹೊರಗಿನಿಂದ ಯಾವ ಪ್ರಣಾಲಿಯ ಅನುಸಾರವಾಗಿ ಸುನಿಯಂತ್ರಿತ ವಾಗಬೇಕಾಗಿರುವುದೋ ಆ ಪ್ರಣಾಲಿಯನ್ನೇ ಸನಾತನ ಧರ್ಮವೆನ್ನುವುದು. ಸನಾತನ ಧರ್ಮವು ವಿಶ್ವಜನೀನವಾಗಿದೆ. ವಿಶ್ವಮಾನವ ಧರ್ಮವೂ ಹೌದು; ಅದು ವಿಶ್ವದ ಎಲ್ಲಾ ಶ್ರೇಣಿಯ ನರ-ನಾರಿಯರ ಸತ್ಯದೃಷ್ಟಿಯಲ್ಲಿ ಪ್ರತಿಷ್ಠಿತವಾದ ಧರ್ಮವಾಗಿದೆ. ಆದು ವಿಶ್ವ ಜನೀನ ಸನಾತನ ಸತ್ಯ ಮತ್ತು ಈ ಸನಾತನ ಧರ್ಮವೇ ವಿಭಿನ್ನ ಸಮ್ಯಕ್‌ಸಂಬುದ್ಧ ಋಷಿಗಳ ಮುಖಗಳಿಂದ ವಿಭಿನ್ನ ಛಂದಸ್ಸು ಮತ್ತು ವಿಚಿತ್ರ ಕವಿತ್ವಪೂರ್ಣ ಗಂಭೀರಾರ್ಥವ್ಯಂಜಕ ಭಾಷೆಗಳ ಮೂಲಕ ಉಪನಿಷತ್ಗ್ರಂಥಗಳಲ್ಲಿ ಪ್ರಕಾಶಿತವಾಯಿತು. ಯಾರು ಸತ್ಯಪಿಪಾಸು ಗಳಾದ ಮನುಷ್ಯರು ಈ ಉಪನಿಷದ್ ವಾಣಿಗಳ ಗೂಢ ತಾತ್ಪರ್ಯಗಳ ಅನುಸಂಧಾನ ಮಾರ್ಗದಲ್ಲಿ ನಡೆಯಲು ಇಚ್ಛಿಸುವರೋ ಅವರು ತನ್ನ ಚೇತನವನ್ನು ಇಂದ್ರಿಯ–ಮನ– ಬುದ್ಧಿಗಳ ಸ್ತರದಿಂದ ಮೇಲಕ್ಕೆ ಒಯ್ಯಲು ಕಾರ್ಯವೆಸಗಬೇಕು ಮತ್ತು ಮೇಲಕ್ಕೆ ಒಯ್ದು ಈ ವಾಣಿಗಳ ಯಥಾರ್ಥ–ತಾತ್ಪರ್ಯವನ್ನು ತಿಳಿಯಬೇಕಾಗುವುದು. ಕೇವಲ ಶಬ್ದಾರ್ಥ ಮತ್ತು ಯುಕ್ತಿ–ತರ್ಕಗಳ ಬಲದಿಂದ ಉಪನಿಷದ್ ವಾಣಿಗಳ ತಾತ್ಪರ್ಯವನ್ನು ಎಂದೂ ಹೃದಯಂಗಮವಾಗಿ ಮಾಡಲಾಗುವುದಿಲ್ಲ.

ಸಮ್ಯಕ್ ಪ್ರಬುದ್ಧವಾದ ಋಷಿಚೇತನದಲ್ಲಿ ಪ್ರತಿಬಿಂಬಿತವಾದ ಚರಮ ಸತ್ಯವನ್ನೇ ಉಪನಿಷತ್ತಿನ ಋಷಿಗಳು 'ಬ್ರಹ್ಮ' ಎಂದರು. ಬ್ರಹ್ಮ ಶಬ್ದದ ಶಾಬ್ದಿಕ ಅರ್ಥ 'ಬೃಹತ್ತಮ' (ಬಹಳ ದೊಡ್ಡದು) ಎಂದು. ಇದರಿಂದ ಬೃಹತ್ತರವಾದ ಯಾವ ಕಲ್ಪನೆಯೂ ಇರಲಾಗದು. ದೇಶಗತ, ಕಾಲಗತ, ಗುಣಗತ, ಶಕ್ತಿಗತ, ಸತ್ತಾಗತ ಮತ್ತು ಅವಸ್ಥಾಗತಗಳ ಯಾವುದೇ ಪ್ರಕಾರದ ಸೀಮೆ, ಪರಿಧಿ ಮತ್ತು ಶೇಷಗಳ ಸಂಬಂಧ ಯಾವ ಕಲ್ಪನೆಯೂ ಇರುವುದಿಲ್ಲವೋ ಪಾಶ್ಚಾತ್ಯ ದರ್ಶನದಲ್ಲಿ ಯಾವುದನ್ನು Infinite Eternal Absolute ಎಂದು ಕರೆಯಲಾದುದೋ ಅದರ ಹೆಸರೇ 'ಬ್ರಹ್ಮ' ಮಾನವನ ಬೌದ್ಧ-ಚೇತನದ (Intellectual Consciousness ಚರಮ ಆದರ್ಶವಾಗಿದೆ, ಸಮಸ್ತ ದಾರ್ಶನಿಕ ಜ್ಞಾನ (Philosophical knowledge)ದ ಚರಮ ಅನುಸಂಧೇಯವದು. ಎಷ್ಟರವರೆಗೆ ಈ 'ಬ್ರಹ್ಮ'ವನ್ನು ಜ್ಞಾನಗೋಚರವನ್ನಾಗಿ ಮಾಡುವುದಿಲ್ಲವೋ ಅಷ್ಟರವರೆಗೆ ಬುದ್ಧಿಯು ಎಂದೂ ತೃಪ್ತಿಯನ್ನು ಪಡೆಯಲಾರದು. ಬುದ್ಧಿ (Intellect) ಸ್ವಭಾವತಃ ಬ್ರಹ್ಮ ಸಾಕ್ಷಾತ್ಕಾರವನ್ನು ಪಡೆಯಲಾರದು. ದಾರ್ಶನಿಕರು ಯುಕ್ತಿತರ್ಕವಾಗಿ ನಿಸ್ಸಂಧಿಗ್ಧ ರೂಪದಿಂದ ಎಂದೆಂದ, ಈ 'ಬ್ರಹ್ಮ'ವನ್ನು ಜ್ಞಾನದಲ್ಲಿ ಪ್ರತಿಷ್ಠೆಗೊಳಿಸಲಾರರು. ಆದರೆ ಮಾನವಚೇತನದಲ್ಲಿ ಯುಕ್ತಿ ತರ್ಕಾತೀತವಾದ, ಬುದ್ಧಿಗೆ ಅತೀತವಾದ ಪಾರಮಾರ್ಥಿಕ ಜ್ಞಾನಭೂಮಿಕೆಯಲ್ಲಿ ಬ್ರಹ್ಮಸಾಕ್ಷಾತ್ಕಾರವನ್ನು ಮಾಡಬಹುದಾಗಿದೆ.

ಉಪನಿಷತ್ತಿನ ಋಷಿಗಳ 'ಬ್ರಹ್ಮ' ಕೇವಲ ಬುದ್ಧಿಯ ಒಂದು ಅವಧಿಗಷ್ಟು ಚರಮ ಆದರ್ಶವಲ್ಲ; ಅದೊಂದು ಅವಾಕ್ ಮಾನವಗೋಚರ ಅಜ್ಞೇಯ ತತ್ತ್ವ ಮಾತ್ರವೆಂದು ಬಗೆದರು. ಆ ಬ್ರಹ್ಮ ಪ್ರತ್ಯಕ್ಷ ಸತ್ಯವಾಗಿದೆ. ಮುನಿಗಳು ಮಾನವ ಚಿತ್ತದಲ್ಲಿ ಬ್ರಹ್ಮಚೇತನವನ್ನು ಜಾಗ್ರತಗೊಳಿಸುವ ಪ್ರಯತ್ನ ಮಾಡಿದರು.

ಪ್ರತ್ಯೇಕ ಮನುಷ್ಯ, ಜೀವ ಪದಾರ್ಥ ಮತ್ತು ಭೂತ—ಭವಿಷ್ಯ—ವರ್ತಮಾನಗಳ ಸಮಸ್ತ ಮನುಷ್ಯ, ಪ್ರಾಣಿ ಮತ್ತು ಎಲ್ಲಾ ಪದಾರ್ಥಗಳ ಸಮಷ್ಟಿ ಭೂತ ವಿಶ್ವ—ಜಗತ್ತಿನ ಯಥಾರ್ಥ ತಾತ್ತ್ವಿಕ ಸ್ವರೂಪವನ್ನು ಉಪನಿಷತ್ತುಗಳು ಹೇಗೆ 'ಸತ್ಯಂ ಜ್ಞಾನಮನಂತಂ' ಎಂದುವೋ ಹಾಗೆಯೇ ಅದನ್ನು 'ರಸಮಯ' ಎಂಬುದಾಗಿ ತಿಳಿದು ಆಸ್ವಾದಿಸಿದವು- 'ರಸೋ ವೈ ಸಃ' ಬ್ರಹ್ಮ ರಸಸ್ವರೂಪನಾಗಿದ್ದಾನೆ, ಪರಮಾಸ್ವಾದ್ಯ ಸ್ವರೂಪವಾಗಿದ್ದಾನೆ, ಪರಮ ಸೌಂದರ್ಯ-ಮಾಧುರ್ಯ ನಿಕೇತನ, ಪರಮಪ್ರೇಮಾಸ್ಪದನು ಆಗಿರುತ್ತಾನೆ. ವಿಶ್ವಜಗತ್ತಿನಲ್ಲಿ ಸರ್ವತ್ರ ರಸ-ವಿಲಾಸವಿದೆ, ಆನಂದ-ಕ್ರೀಡೆಯಿದೆ. ಜಗತ್ತಿನಲ್ಲಿ ಯಾವ ಸಂಘರ್ಷ, ಜೀವನ-ಸಂಗ್ರಾಮ, ಘಾತ—ಪ್ರತಿಘಾತ ಮತ್ತು ಆಪಾತ-ಭೀಭತ್ಸತಾಭಾವ, ಯುದ್ಧ ಕಲಹಗಳಿವೆಯೋ ಅವೆಲ್ಲದರಲ್ಲಿಯೂ ಕೂಡ ಒಂದು ಅನಂತ ಚೈತನ್ಯ ಘನಸ್ವರೂಪನಾದ ಬ್ರಹ್ಮನ ವಿಚಿತ್ರ ರಸವಿಲಾಸವೇ ತುಂಬಿಕೊಂಡಿರುವುದು. ಉಪನಿಷತ್ತಿನ ದೃಷ್ಟಿಯಲ್ಲಿ ಎಲ್ಲವೂ ರಸಮಯ, ಸುಂದರ ಮತ್ತು ಆಸ್ವಾದ್ಯವಾಗಿರುತ್ತದೆ. ಆನಂದರೂಪದಲ್ಲಿ, ವಿಜ್ಞಾನರೂಪದಲ್ಲಿ, ಮನೋರೂಪದಲ್ಲಿ, ಪ್ರಾಣರೂಪದಲ್ಲಿ ಅನ್ನಯಾ ಇತರ ಭೋಗ್ಯ ಪದಾರ್ಥದಲ್ಲಿಯೂ ಕೂಡ ರಸಾಮೃತಸಿಂಧು ಬ್ರಹ್ಮನದೇ ಆತ್ಮಾಭಿವ್ಯಕ್ತಿ ಮತ್ತು ಆತ್ಮಾಸ್ವಾದನ ಆಗುತ್ತಲಿದೆ. 'ಆನಂದಂ ಬ್ರಹ್ಮ' 'ವಿಜ್ಞಾನಂ ಬ್ರಹ್ಮ' 'ಮನೋ ಬ್ರಹ್ಮ' 'ಪ್ರಾಣೋ ಬ್ರಹ್ಮ' 'ಅನ್ನಂ ಬ್ರಹ್ಮ'. ಸಂಬಂಧ ಮಾನವಚೇತನದ ಅನುಭೂತಿಯಲ್ಲಿ ಸಮಸ್ತ ವಿಶ್ವಜಗತ್ತು ಪ್ರೇಮ ಮತ್ತು ಆನಂದಸಹಿತ ಆಸ್ವಾದ್ಯವಾಗಿರುತ್ತದೆ. ●

# ಮರುದ್ಭಿರಗ್ನೇ ಆಗಹಿ

● ಶ್ರೀ ಕಯ್ಯಾರ ಕಿಞ್ಞಣ್ಣ ರೈ

ಅಗ್ನಿ ಬಾ ಮರುತುಗಳ ಜತೆಗೆ ಬಾ !
ಈ ಸುಂದರಾಧ್ವರಕೆ ಸಂಭ್ರಮೋಲ್ಲಸದಿ ಬಾ !
ಸೋಮರಸ ಪೀಯೂಷ ಪಾನಕಿದೆ ಪಾರಿ ಬಾ !
ಬಾ! ನಿನ್ನೊಳೆನ್ನ ಕರುಳಿನ ಕರೆಯು ಕರುಣಿ ಬಾ!
ಅಗ್ನಿ ಬಾ ಮರುತುಗಳ ಜತೆಗೆ ಬಾ! ॥ ೧ ॥

ಇಲ್ಲ ದೇವರೊಳಾರು, ಇಲ್ಲ ಮರ್ತ್ಯರೊಳಾರು,
ನಿನ್ನ ಕ್ರತು ಶಕ್ತಿಯಂ ಮೀರಿದರು ಯಾರಿಹರು?
ಬಾ ಮಹಾಮಹಿಮ ನಿನಗಿದೊ ಎನ್ನ ಕರೆಯಿಹುದು
ಅಗ್ನಿ ಬಾ ಮರುತುಗಳ ಜತೆಗೆ ಬಾ ! ॥ ೨ ॥

ಆ ಮಹಾಗಗನಾಂತರಾಳದಲಿ ಗೋಳದಲಿ,
ವಿಸ್ತಾರ ಸಂಚಾರ ಸಂವಾಸ ಮೇಳದಲಿ
ಇದ್ದರೂ-ಅದ್ರೋಹರಪ್ಪ ದೇವರ ಕೂಡಿ,
ಅಗ್ನಿ ಬಾ ಮರುತುಗಳ ಜತೆಗೆ ಬಾ! ॥ ೩ ॥

ಮೇಘನಿರ್ಘೋಷದಿಂದುಗ್ರರು ಸಮುಗ್ರರುಂ,
ಸರ್ವ ಬಲಗರ್ವಿತರದರ್ಪ ನಿರ್ಮೂಲರುಂ,
ಆದ ಆ ಮರುತುಗಳ ನಾದದಿಂ ಮೋದದಿಂ
ಅಗ್ನಿ ಬಾ ಮರುತುಗಳ ಜತೆಗೆ ಬಾ ! ॥ ೪ ॥

ಶುಭ್ರ ಸ್ವರೂಪರೆನೆ, ಘೋರರೂಪರು ಮೆನಿಸಿ,
ಸೃಷ್ಟಿ ಸಾಮ್ರಾಜ್ಯವಂ ಸುಕ್ಷತ್ರದಿಂ ವಹಿಸಿ
ಹಿಂಸಕಧ್ವಂಸಕರು ಮೆನಿಪ ಮರುತುಗಳೊಡನೆ
ಅಗ್ನಿ ಬಾ ಮರುತುಗಳ ಜತೆಗೆ ಬಾ! ॥ ೫ ॥

ಸರ್ವ ಸುಖವಿರುವಲ್ಲಿ, ಸೂರ್ಯ ನಿಂ ಮೇಗಲ್ಲಿ
ಮೇಲುಮೇಲ್ ಲೋಕವಲಿ ಮಿರುಮಿರುಗುತಿರುವಲ್ಲಿ,
ದಿನದ ಆದೇವರ್ಕಳೊಡನಾಡಿ ಕೂಡಿ ಬಾ
ಅಗ್ನಿ ಬಾ ಮರುತುಗಳ ಜತೆಗೆ ಬಾ! ॥ ೬ ॥

ನೀಲಿಮವಿಶಾಲಸಾಗರ ಮಹಾವಕ್ಷದಲಿ
ಪರ್ವತೋನ್ನತ ಜಲತರಂಗ ಸಂಘಟ್ಟದಲಿ
ಆವ ದೇವರ್ಕಳಾ ಮಾಹಾತ್ಮ್ಯ ಮೆರೆದಿಹುದೊ
ಅಗ್ನಿ ಬಾ ಮರುತುಗಳ ಜತೆಗೆ ಬಾ! ॥ ೭ ॥

ರಮಣೀಯ ರಶ್ಮಿಯಿಂ ಗಗನದಲಿ ಕಂಗೊಳಿಸಿ,
ಬಲದಿಂ ಮಹಾಸಮುದ್ರವ ದುರ್ಬಲಂ ಗೊಳಿಸಿ,
ಸಾಗರೋತ್ತರ ಕಿರಣ ಬೀರಿ ಬೀಗುವರೊಡನೆ
ಅಗ್ನಿ ಬಾ ಮರುತುಗಳ ಜತೆಗೆ ಬಾ ! ॥ ೮ ॥

ಅಗ್ನಿ ಬಾ ಮರುತುಗಳ ಜತೆಗೆ ಬಾ !
ಎರೆವೆನಿದೊ ಸೋಮರಸ ಪ್ರಥಮ ಪಾನಕೆ ನಿನಗೆ
ಹೇ ಅಗ್ನೆ! ಕುಡಿ ನೀನೇ, ಈ ಮಧುರ ಮಧುವನ್ನೆ !
ಬಾ! ನಿನ್ನೊಳಿನ್ನ ಕರುಳಿನ ಕರೆಯು ಕರುಣಿ ಬಾ!
ಅಗ್ನಿ ಬಾ ಮರುತುಗಳ ಜತೆಗೆ ಬಾ! ॥ ೯ ॥

[ಋಗ್ವೇದದಿಂದ]

# " ಮೆಂತ್ಯದ ಸೊಪ್ಪು"

● ರಾಜವೈದ್ಯ ವೈ. ಆರ್. ಪಂಡಿತ ವಾಸು, M.R.C I M A.R.M.P. ಬೆಂಗಳೂರು

ಪರಮಾತ್ಮನು ಸ್ವತಃ ಆನಂದಮಯನು, ಪರಮ ಕರುಣಾಸಾಗರನಾದ ಆ ಭಗವಂತನ ಸೃಷ್ಟಿಯು ಆನಂದಮಯವೇ ಆಗಿದೆ. ಜೀವಾತ್ಮನು ಸಹ ಆನಂದಮಯವನ್ನು ಪಡೆದುಕೊಳ್ಳಲೆಂದೇ ಅವನಿಗೆ ಕರ್ಮಭೂಮಿಯಾದ ಈ ವಿಶಾಲ ಜಗತ್ತಿನ ನಿರ್ಮಾಣವನ್ನು ಮಾಡಿಕೊಟ್ಟಿದ್ದಾನೆ.

ರೋಗವನ್ನು ಗುಣಪಡಿಸುವುದಕ್ಕಿಂತ ನಿರೋಧಿಸುವುದೇ ಸರ್ವೋತ್ತಮ. ದೀರ್ಘಾಯುರಾರೋಗ್ಯ ಪಡೆಯುವುದರ ಕಡೆ ನಮ್ಮ ಗಮನ ಕೊಡಬೇಕಾದುದು ಪ್ರಪ್ರಥಮ ಕೆಲಸ. ಜೀವನ ಮಟ್ಟವನ್ನು ಹೆಚ್ಚಿಸಲು ಆರೋಗ್ಯವೂ ಒಂದು ಕಾರಣಕಾರಿ. ರೋಗ ನಿರ್ಮೂಲನಕ್ಕೆ ಜೀವನದ ಮಟ್ಟವೂ ಕಾರಕ.

ಊರಿಗೊಂದು ದಾರಿ ಬೇಕು, ಜಮೀನಿಗೊಂದು ಬಾವಿ ಬೇಕು—ಆಹಾರದ ಕಡೆ ಗಮನವಿರಬೇಕು ಎಂದು ಅನುಭವಿಗಳು ಹೇಳಿದ್ದಾರೆ.

ಮಹಾಜನರು ಸಣ್ಣಪುಟ್ಟ ವ್ಯಾಧಿಗಳ ವಿಷಯದಲ್ಲಿ ಸರಿಯಾದ ತಿಳುವಳಿಕೆಯಿಲ್ಲದೆ ಲಕ್ಷಾಂತರ ಜನರು ಯಾತನೆ ಅನುಭವಿಸುತ್ತಿದ್ದಾರೆ. ವ್ಯಾಧಿಗಳನ್ನು ನಾವು ದಿನನಿತ್ಯ ಸೇವಿಸುವ ಆಹಾರದ ಮೂಲಕವೇ ತಡೆಗಟ್ಟಬಹುದು, ಅಥವಾ ಪ್ರಾರಂಭದ ಮೊದಲೇ ಚಿಕಿತ್ಸೆ ಹೊಂದಿ ಗುಣಪಡಿಸಿಕೊಳ್ಳಬಹುದು.

ಸುಮಾರು ೪೦ ವರ್ಷಗಳಿಂದಲೂ ರಾಜರು, ಮಹಾರಾಜರುಗಳಿಗೆ ವೈದ್ಯ ಸೇವೆಯನ್ನು ಸಲ್ಲಿಸಿದುದಲ್ಲದೆ ಹಳ್ಳಿಗಾಡಿನ ಜನರಿಗೂ, ಪಟ್ಟಣದಲ್ಲಿ ವಾಸಿಸುವ ಶ್ರೀಮಂತ, ಬಡವ, ವಿದ್ಯಾವಂತ, ಅವಿದ್ಯಾವಂತ ಎಂಬ ಭೇದಭಾವನೆಯಿಲ್ಲದೆ ಇವರಿಗೆಲ್ಲಾ ಸುಲಭವಾಗಿ ತಿಳಿಯುವಂತೆ ಹೆಚ್ಚಿಗೆ ಆಹಾರ ವಿಹಾರಾದಿಗಳ ಮೂಲಕವೇ ಚಿಕಿತ್ಸೆ ನೀಡುತ್ತಿದ್ದೇನೆ. ಪ್ರತಿಯೊಬ್ಬ ಪ್ರಜೆಯೂ ದೀರ್ಘಾಯುರಾರೋಗ್ಯವಂತನಾಗಿರಬೇಕೆಂಬುದೇ ನನ್ನ ಮುಖ್ಯ ಗುರಿಯಾಗಿರುತ್ತೆ.

ದೇಹ ಪ್ರಕೃತಿಯ ಮೇಲೆ ಆಧಾರಿತ ಚಿಕಿತ್ಸೆ ಅವಶ್ಯಕವಾದದ್ದು ಕಾಯಿ–ಪಲ್ಲೆ-ಹಸಿರು ಸೊಪ್ಪುಗಳಲ್ಲಿ ದೇಹದ ಬೆಳವಣಿಗೆ, ದೇಹರಕ್ಷಣೆಗೆ ಜೊತೆಯಾಗಿ ರೋಗವನ್ನು ನಿರೋಧಿಸುವ ಹಾಗೂ ಗುಣಪಡಿಸುವ ಔಷಧಿಗಳು ಕೂಡಿವೆ.

ಆರೋಗ್ಯದ ಭಾಗ್ಯವು ತಿಳಿಯುವುದು, ಅನಾರೋಗ್ಯವಾದಾಗಲೇ. ತಮ್ಮ ತಪ್ಪುಗಳಿಗಾಗಿ ಪಶ್ಚಾತ್ತಾಪ ಪಡುವವರೇ ಬಹಳ. ನಿಮ್ಮ ಅನಾರೋಗ್ಯಕ್ಕೆ ನೀವು ಹೊಣೆಯಾದರೆ ಆಗಿಹೋದ ವಿಷಯಗಳನ್ನು ಯೋಚಿಸಿ ಪ್ರಯೋಜನವಿಲ್ಲ. ನಿರಾಶರಾಗಬೇಕಾದುದ್ದೇನಿಲ್ಲ. ಖಂಡಿತವಾಗಿಯೂ ಪುನಃ ಆರೋಗ್ಯವಂತರಾಗಬಲ್ಲಿರಿ. ಮೊದಲು ರೋಗಗಳನ್ನು ತಡೆಗಟ್ಟುವ ವಿಧಾನಗಳನ್ನು ತಿಳಿದುಕೊಳ್ಳಬೇಕು.

ರೋಗ ಚಿಕಿತ್ಸೆಯಲ್ಲಿ ಅನುಕೂಲತೆ, ರೋಗಿಯ ರುಚಿ ಒಲವುಗಳನ್ನು ಅನುಸರಿಸಿ ವಿಧವಿಧದ ಔಷಧಗಳನ್ನು ಮಾಡಿದಾಗ್ಯೂ ನಾವು ಸೇವಿಸುವ ಆಹಾರದಲ್ಲಿಯೇ ರೋಗಗಳನ್ನು ನಿರೋಧಿಸುವ ಶಕ್ತಿ ಇರುವುದರಿಂದ ಔಷಧಿಗಳ ಮಾತೇಕೆ ?

ಮಾನವನಿಗೆ ಪ್ರಾಣವು ಬಹಳ ಅಮೂಲ್ಯವಾದುದು. "ಬದುಕಿದರೆ ಬೇಡಿ ತಿಂದೇನು," ಎಂಬ ಉವಾಚವಿದೆ. ಏನೇ ಕಷ್ಟ ಬರಲಿ, ಪ್ರತಿಯೊಂದು ಪ್ರಾಣಿಯೂ ತನ್ನ ಪ್ರಾಣವನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತದೆ. ಹೀಗಿರುವಾಗ ಒಂದು ಪ್ರಾಣವನ್ನು ಕೊಂದು ಮತ್ತೊಂದುಪ್ರಾಣವನ್ನು ಉಳಿಸಲು ಪ್ರಯತ್ನಿಸಬೇಡ ಎಂದು ಅನುವಂಶಿಕ ಆಯುರ್ವೇದ ವೈದ್ಯರ ಅಭಿಪ್ರಾಯವಾಗಿದೆ.

ಈ ವಸುಧೆಯಲ್ಲಿ ಎಲ್ಲಿ ನೋಡಿದರೂ ದೈವ ನಿರ್ಮಿತವಾದ ಮತ್ತು ಮಾನವ ನಿಗೂ, ಪ್ರಾಣಿಗಳಿಗೂ, ಪ್ರಾಣರಕ್ಷಣೆ ಮಾಡುವ ಮತ್ತು ಆರೋಗ್ಯವನ್ನೂ, ಶಕ್ತಿಯನ್ನೂ ಕೊಟ್ಟು ಅನೇಕ ರೋಗಗಳನ್ನೂ ನಿವಾರಿಸುವಂಥ ಸಸ್ಯಗಳು ಮತ್ತು ಮೂಲಿಕೆಗಳು ಒಂದೊಂದು ಒಂದೊಂದು ವಿಧವಾದ ಗುಣವನ್ನು ಹೊಂದಿ ಹೇರಳವಾಗಿ ಗೋಚರಿಸುತ್ತಿವೆ. ಇವುಗಳಲ್ಲಿ ಕೆಲವು ನಿಯಮಿತವಾದ ಸಸ್ಯಗಳನ್ನು ನಾವು ತರಕಾರಿಯ ರೂಪದಲ್ಲಿ ಹಲವು ಸೊಪ್ಪುಗಳನ್ನು ಪ್ರತಿದಿನ ಉಪಯೋಗಿಸುತ್ತೇವೆ, ಎಂದರೆ ನಾವು ಸೇವಿಸುವ ಆಹಾರ-ಪದಾರ್ಥಗಳ ಜೊತೆಯಲ್ಲಿ ಹೆಚ್ಚಾಗಿ ಸೊಪ್ಪುಗಳನ್ನು ಉಪಯೋಗಿಸಿದರೆ ನಮ್ಮ ಅನೇಕ ರೋಗಗಳನ್ನು ಹೋಗಲಾಡಿಸಿ ಪುಷ್ಟಿಯನ್ನು ಕೊಟ್ಟು ಆರೋಗ್ಯವನ್ನು ಕಾಪಾಡುತ್ತದೆ. ಇಂತಹ ಸೊಪ್ಪುಗಳಲ್ಲಿ ಪೌಷ್ಟಿಕಾಂಶ ಸತ್ವವಿರುವ ಮೆಂತ್ಯದ ಸೊಪ್ಪು ಸಹ ಒಂದಾಗಿರುತ್ತದೆ.

ಈ ಮೆಂತ್ಯದ ಸೊಪ್ಪಿನಲ್ಲಿ ಸಾಮಾನ್ಯವಾಗಿ ನಾವು ಉಪಯೋಗಿಸುವ ಸೊಪ್ಪು ಮತ್ತು ಕಾಡು ಮೆಂತ್ಯದ ಸೊಪ್ಪು ಎಂಬುದಾಗಿ ಎರಡು ವಿಧಗಳಿವೆ. ಈ ಸೊಪ್ಪನ್ನು ತೋಟಗಳಲ್ಲಿ ಬೆಳೆಯಲಾಗುತ್ತದೆ. ಇದು ಸಾಧಾರಣವಾಗಿ ಅರ್ಧ ಅಡಿಯಿಂದ ಒಂದೂವರೆ ಅಡಿಯಷ್ಟು ಎತ್ತರ ಬೆಳೆಯುತ್ತದೆ. ಇದನ್ನು ನೋಡಲು ಸಣ್ಣ ಸಣ್ಣ ಎಲೆಗಳಿಂದ ಕೂಡಿ ಕೊಂಡು ಅಂದವಾಗಿ ಕಾಣುತ್ತದೆ. ತೋಟಗಳಲ್ಲಿ ಬೆಳೆಯುವ ಈ ಸೊಪ್ಪನ್ನು ಆಹಾರ ಪದಾರ್ಥಗಳೊಡನೆ ಉಪಯೋಗಿಸಿದರೆ ವಾಯು ಹರವಾಗುತ್ತೆ. ಇದನ್ನು "ಮಸೊಪ್ಪು" ಎಂಬ ಒಂದು ವಿಧವಾದ ಸಾಂಬಾರನ್ನು ಮಾಡುವುದರಲ್ಲಿ ಸ್ವಲ್ಪ ಹೆಚ್ಚು ಪ್ರಮಾಣದಲ್ಲಿ ಇತರೆ ಚಕ್ಕೋತ-ಕೊತ್ತಂಬರಿ ಮತ್ತು ಗೋಣಿಸೊಪ್ಪುಗಳ ಸಂಗಡ ಉಪಯೋಗಿಸಿದ ಸಾಂಬಾರ್ ಬಹಳ ರುಚಿಕರವಾಗಿಯೂ-ವಾಯುಹರವಾಗಿಯೂ-ಆರೋಗ್ಯಕರವಾಗಿಯೂ ಆಗಿರುತ್ತೆ.

ಮೆಂತ್ಯದ ಸೊಪ್ಪು, ವಾತ ಸಂಬಂಧವಾದ ಎಲ್ಲಾ ವಿಕಾರಗಳನ್ನೂ ಶಾಂತಗೊಳಿಸು ವುದಲ್ಲದೆ, ಮಲಬದ್ಧತೆಯೂ ನಿವಾರಣೆಯಾಗುತ್ತದೆ. ಜಠರಾಗ್ನಿಯನ್ನು ಹೆಚ್ಚಿಸುತ್ತದೆ. ಈ ಸೊಪ್ಪನ್ನು ಹಬೆಯಿಂದ ಬೇಯಿಸಿ ತಿನ್ನುವುದರ ಮೂಲಕ ಇದರಲ್ಲಿರುವ ಕ್ಷಾರಗಳು ಸಂಪೂರ್ಣವಾಗಿ ನಮ್ಮ ಶರೀರಕ್ಕೆ ಸೇರುತ್ತವೆ.

ಮೆಂತ್ಯದ ಸೊಪ್ಪನ್ನು ಚಿಕ್ಕ-ಚಿಕ್ಕಪಾತ್ರೆಗಳಲ್ಲಿ ಮೆಂತ್ಯದ ಬೀಜವನ್ನು ಬಿತ್ತುವು ದಕ್ಕಿಂತ ಮೊದಲು ಗೇರುಬೀಜವನ್ನು ಕುಟ್ಟಿ ಸಣ್ಣದಾಗಿ ಪುಡಿಮಾಡಿ ಗೊಬ್ಬರಕ್ಕೆ ಬದಲಾಗಿ

ಮಣ್ಣಿನ ಜೊತೆಯಲ್ಲಿ ಬೆರಸಿ ಭೂಮಿಯನ್ನು ಹಸನು ಮಾಡಿಕೊಂಡು ಬಿತ್ತಿದರೆ ಮೆಂತ್ಯದ ಸೊಪ್ಪು ಬೆಳೆಯುತ್ತದೆ. ಈ ಸೊಪ್ಪನ್ನು ವಾಯುರೋಗದವರು ಮತ್ತು ಪಾರ್ಶ್ವವಾಯುವಿನಿಂದ ನರಳುತ್ತಿರುವವರೂ ಸಹ ಒಂದು ದಿನಕ್ಕೆ ಒಬ್ಬರಿಗೆ ತಿನ್ನಲು ಸಾಕಾಗುವಷ್ಟು ಈ ಸೊಪ್ಪನ್ನು ಉಪ್ಪಿಲ್ಲದೆ ಹಬೆಯಲ್ಲಿ ಬೇಯಿಸಿ ೪೮ ದಿನಗಳು ಕ್ರಮವಾಗಿ ಸೇವಿಸಿದರೆ ಪಾರ್ಶ್ವವಾಯುವು ಸಂಪೂರ್ಣ ಗುಣವಾಗುತ್ತದೆ. ಮತ್ತು ಸಕಲ ವಾತಸಂಬಂಧವಾದ ರೋಗಗಳೂ ನಿವಾರಣೆಯಾಗುತ್ತವೆ. ಗೇರನ್ನು ಮಣ್ಣಿನೊಡನೆ ಸೇರಿಸಿ ಕುಟ್ಟಬೇಕು.

೧) ಮೆಂತ್ಯದ ಸೊಪ್ಪನ್ನು ಬೇಯಿಸಿದ ಒಂದು ಲೋಟ ಕಷಾಯ ಮತ್ತು ಹಸಿಶುಂಠಿ ರಸ (ಸುಣ್ಣ ತೆಗೆದದ್ದು) ಒಂದು ಚಮಚ, ಎರಡು ಚಮಚ ಜೇನು ಸೇರಿಸಿ ಪ್ರತಿ ದಿವಸವೂ ಕುಡಿಯುತ್ತಾ ಬಂದರೆ ಕ್ಷಯ–ಕೆಮ್ಮು–ದಮ್ಮು ಈ ರೋಗಗಳಿಗೆ ಉತ್ತಮ ಪರಿಹಾರ ದೊರಕುವುದು.

೨) ನಾವು ಪ್ರತಿದಿನ ಸೇವಿಸುವ ಹಲವು ಬಗೆಯ ಅಡಿಗೆಯ ಪದಾರ್ಥಗಳಲ್ಲಿ ಚಿತ್ರಾನ್ನ – ಪುಳಿಯೋಗರೆ, ವಾಂಗೀಬಾತ್–ಬಕಾಳಬಾತ್ – ವಿಜಿಟೇಬಲ್ ರೈಸ್‌ಬಾತ್– ಘೀ ರೈಸ್‌ಬಾತ್–ಮುಂತಾದುವುಗಳಂತೆಯೇ ಬರೀ ಮೆಂತ್ಯದ ಸೊಪ್ಪನ್ನೇ ಇವುಗಳಿಗೆ ಬದಲಾಗಿ ಹೆಚ್ಚಿನ ಪ್ರಮಾಣದಲ್ಲಿ ಅನ್ನದ ಜೊತೆಯಲ್ಲಿ ಬೇಯಿಸಿ ಒಗ್ಗರಣೆಯನ್ನು ಮಾಮೂಲಾಗಿ ಹಾಕಿ ಆಗಾಗ್ಗೆ ಈ ರೀತಿಯಾಗಿ "ಮೆಂತ್ಯದ ಅನ್ನ"ವನ್ನೂ ಸಹ ಮಾಡಿ ಆಹಾರವಾಗಿ ಸೇವಿಸಲು ಶರೀರದ ವಾತ ಸಂಬಂಧವಾದ ರೋಗಗಳೆಲ್ಲವೂ ಕ್ರಮೇಣ ಹರವಾಗುತ್ತವೆ. ಬಾಯಿಗೂ ರುಚಿಯಾಗಿ ಹಸಿವನ್ನು ಹೆಚ್ಚಿಸುತ್ತದೆ.

೩) ಮೆಂತ್ಯದ ಕಾಳನ್ನೂ ಸಹ ನಿತ್ಯದ ಅಡಿಗೆ ಪದಾರ್ಥಗಳಲ್ಲಿ ಕೆಲವಕ್ಕೆ ಉಪಯೋಗಿಸುವುದು ಆರೋಗ್ಯಕ್ಕೆ ಉತ್ತಮವಾಗಿರುತ್ತೆ. ಈ ಮೆಂತ್ಯದ ಕಾಳುಗಳನ್ನು ಔಷಧಿಗಳಿಗೂ ಉಪಯೋಗಿಸಲಾಗುತ್ತೆ. ಸಾಧಾರಣ ಭೇದಿಯಾಗುವವರು ಕಾಲು ಚಮಚದಷ್ಟು ಮೆಂತ್ಯದ ಕಾಳುಗಳನ್ನು ಸ್ವಲ್ಪ ಮೊಸರಿನೊಡನೆ ಸೇವಿಸಿದರೆ ಭೇದಿ ನಿಲ್ಲುತ್ತದೆ.

೪) ಮೆಂತ್ಯವನ್ನು ಕುಟ್ಟಿ ಪುಡಿ ಮಾಡಿ ಒಂದು ಚಿಕ್ಕ ಮಣ್ಣಿನ ಪಾತ್ರೆಯಲ್ಲಿ ನೀರು ಹಾಕಿ ಬೇಯಿಸಿ ಕುರುಗಳ ಮೇಲೆ ಕಟ್ಟಿದರೆ ಊತ ಮತ್ತು ನೋವು ಶಾಂತವಾಗುತ್ತವೆ.

೫) ಮೆಂತ್ಯದ ದೋಸೆಯನ್ನು ತಯಾರಿಸಿ ಹಬೆಯಲ್ಲಿ ಬೇಯಿಸಿದ ಮೆಂತ್ಯದ ಸೊಪ್ಪಿನ ಪಲ್ಯದೊಂದಿಗೆ ತಿನ್ನುವುದರಿಂದ ಅಂಗಾಂಗಗಳ ನೋವು ಪರಿಹಾರವಾಗುತ್ತದೆ. ಮತ್ತು ಹೊಟ್ಟೆಯೊಳಗೆ ಇದ್ದ ದೂಷಿತ ವಾಯುವೂ ಸಹ ನಿವಾರಣೆಯಾಗುತ್ತದೆ.

೬) ಮೆಂತ್ಯ ೧ ಪಾವು, ಹೆಸರು ಕಾಳು ೧ ಪಾವು, ಕೊತ್ತಂಬರಿ ಬೀಜ ೨೦ ಗ್ರಾಂ, ಕಚೋರ ೩೦ ಗ್ರಾಂ, ಕಸ್ತೂರಿ ಅರಿಶಿನ ೩೦. ಗ್ರಾಂ, ಇವುಗಳನ್ನು ತಂದು ಕುಟ್ಟಿ ಶೋಧಿಸಿಕೊಂಡು ಇಟ್ಟುಕೊಳ್ಳಬೇಕು. ಇದರ ಸ್ವಲ್ಪ ಪುಡಿಯನ್ನು ನೀರಿನೊಡನೆ ಕೂಡಿಸಿ ಶರೀರಕ್ಕೆ ಹಚ್ಚಿ ಸ್ನಾನ ಮಾಡುವುದರಿಂದ ಮೈಮೇಲೆದ್ದಿರುವ ಪಿತ್ತದ ಗುಳ್ಳೆಗಳು ನಾಶವಾಗುತ್ತವೆ. ಮತ್ತು ಚರ್ಮವೂ ಸ್ವಚ್ಛವಾಗುವುದಲ್ಲದೆ ಮೃದುವೂ ಆಗುತ್ತದೆ.

೭) ಗೋಧಿ ೧ ಸೇರು, ೧ ಪಾವು ಮೆಂತ್ಯ, ೧೦ ಗ್ರಾಂ ಜೀರಿಗೆ, ಏಲಕ್ಕಿ 2½ ಗ್ರಾಂ, ಲವಂಗ ೧ ಗ್ರಾಂ, ಶುಂಠಿ ೨ ಗ್ರಾಂ, ಧನಿಯ ೨ ಗ್ರಾಂ, ಇವುಗಗಳನ್ನು ಬೀಸಬೇಕು.

ನಂತರ ಬೇಕಾದಷ್ಟು ಬೀಸಿದ ಹಿಟ್ಟನ್ನು ತೆಗೆದುಕೊಂಡು (ಉಪ್ಪು ಹಾಕಬಾರದು) ನೀರಿನಿಂದ ಕಲಸಿ ಅಥವಾ ಹಾಲಿನಿಂದ ಕಲಸಿ ಹಬೆಯಲ್ಲಿ ರೊಟ್ಟಿ ಸುಟ್ಟು ತಿನ್ನುತ್ತಾ ಸಕಲ ವಿಧ ವಾತ ರೋಗಗಳು, ಪಾಂಡುರೋಗ, ಮೂರ್ಛೆ, ಬುದ್ಧಿಭ್ರಮೆ, ಮೋಹ, ತಲೆನೋವು, ಮೂಗು ಮತ್ತು ಕಣ್ಣಿನ ನೋವುಗಳು ಶಾಂತವಾಗುತ್ತವೆ, ಮತ್ತು ಬಲ, ವೀರ್ಯ ಪುಂಸತ್ವಗಳು ಹೆಚ್ಚುತ್ತವೆ.

ಕಾಡು ಮೆಂತ್ಯದ ಸೊಪ್ಪು– ಇದು ದಿನ್ನೆಗಳಲ್ಲಿ ಕೆಲವು ಮೈದಾನುಗಳಲ್ಲಿ ಅಲ್ಲಲ್ಲಿ ಸ್ವಲ್ಪ–ಸ್ವಲ್ಪವಾಗಿ ಬೆಳೆದಿರುತ್ತೆ. ಇದನ್ನು ಔಷಧಿಗಳಿಗೆ ತಯಾರಿಸಬೇಕಾದ ಕೆಲವು ಲೋಹ ಭಸ್ಮಗಳ ತಯಾರಿಕೆಯಲ್ಲಿ ಉಪಯೋಗಿಸಲಾಗುತ್ತದೆ. ಹೀಗೆ ಮೆಂತ್ಯದ ಸೊಪ್ಪು ಶರೀರಕ್ಕೆ ಆರೋಗ್ಯವನ್ನು ಕೊಟ್ಟು ಕಾಪಾಡತಕ್ಕ ಶ್ರೇಷ್ಠ ಮೂಲಿಕೆಯಾಗಿರುತ್ತತೆ.

ಪರಮಾತ್ಮನು ಸೃಷ್ಟಿಸಿರುವ ಮೂಲಿಕೆಗಳ ಮೇಲೆ ಸಂಪೂರ್ಣವಾಗಿ ನಂಬಿಕೆಯಿಟ್ಟು ಉಪಯೋಗಿಸುತ್ತಾ ಬಂದರೆ ಆರೋಗ್ಯವನ್ನೂ ಕೊಡುವುದಲ್ಲದೆ ಧರ್ಮಬುದ್ಧಿಯಿಂದ ನಡೆದು ಕೊಳ್ಳುವವನನ್ನು ಮುಟ್ಟಲು ಮೃತ್ಯು ಕೂಡ ಹೆದರುತ್ತದೆ.

---

# ಮಕ್ಕಳ ವ್ಯಕ್ತಿತ್ವದ ವಿಕಾಸ ಹೇಗಾದೀತು?

● ಶ್ರೀಮತಿ ಸಾವಿತ್ರೀ ದೇವಿ, ಎಂ. ಎ.

ಮಗುವಿನ ಬಾಲ್ಯಾವಸ್ಥೆಯಲ್ಲಿಯೇ ಅವರ ವ್ಯಕ್ತಿತ್ವ ವಿಕಾಸಗೊಳ್ಳಲು ಯೋಗ್ಯ ವ್ಯವಸ್ಥೆ ಮಾಡಿದ್ದಾದರೆ ಅನೇಕ ರೀತಿಯ ಅಭಾವ ಹಾಗೂ ಅಸಫಲತೆಗಳ ನಡುವೆಯೂ ತನ್ನ ಜೀವನವನ್ನು ಸುಖಮಯವನ್ನಾಗಿ ಮಾಡಿಕೊಳ್ಳಲು ಸಾಧ್ಯ. ಜೀವನದ ಸೋಲು–ಗೆಲುವುಗಳನ್ನು ಅವನು ಸಹಜ ರೀತಿಯಿಂದ ಸ್ವೀಕರಿಸಬಲ್ಲನು. ಆದುದರಿಂದ ತಾಯಿ, ತಂದೆ ಹಾಗೂ ಅಧ್ಯಾಪಕರುಗಳ ಪ್ರಪ್ರಥಮ ಕರ್ತವ್ಯವೆಂದರೆ ಮಕ್ಕಳಲ್ಲಿ ಸಹನಶೀಲತೆ, ಆತ್ಮ ನಿರ್ಭರತೆ ಸಹಕಾರ-ಸೌಹಾರ್ದ ಭಾವನೆ, ವ್ಯವಹಾರ ಕುಶಲತೆ–ಇವುಗಳನ್ನು ಬೆಳೆಸಿದರೆ ಅವರ ಜೀವನ ಸಫಲತೆಯನ್ನು ಹೊಂದುವುದರಲ್ಲಿ ಸಂಶಯವಿಲ್ಲ. ಅದಕ್ಕಾಗಿ ಈ ಕೆಳಗಿನ ನಿಯಮಗಳನ್ನು ಗಮನದಲ್ಲಿರಿಸಬೇಕು:–

೧) ಯಾವುದಾದರೂ ಮಗುವಿನಲ್ಲಿ ಶಾರೀರಿಕ ಅಥವಾ ಮಾನಸಿಕ ನ್ಯೂನತೆ ಗಳೇನಾದರೂ ಇದ್ದಲ್ಲಿ, ಅವರನ್ನು ಸಮಾನ ಯೋಗ್ಯತೆ ಹಾಗೂ ಸಾಮರ್ಥ್ಯವಿರುವ ಮಕ್ಕಳೊಂದಿಗೆಯೇ ಬೆಳೆಸಬೇಕು. ಅವರಲ್ಲಿ ಕುರೂಪತ್ವವಿದ್ದರೆ ಅವರಲ್ಲಿ ಆತ್ಮವಿಶ್ವಾಸ ತುಂಬಿ ಬೇರೆ ಯಾವುದಾದರೂ ವಿಷಯದಲ್ಲಿ ವಿಶೇಷ ಉನ್ನತಿ ಪಡೆಯುವಂತೆ ಪ್ರಯತ್ನಿಸ ಬೇಕು; ಪ್ರೋತ್ಸಾಹಿಸಬೇಕು.

೨) ಎಲ್ಲಾ ವಿಷಯಗಳಲ್ಲಿಯೂ ಆಸಕ್ತಿ ಹಾಗೂ ಯೋಗ್ಯತೆ ಇರುವವರು ಸಿಕ್ಕುವುದು ಬಹಳ ಕಡಿಮೆ. ಕೆಲವರಿಗೆ ವಿಜ್ಞಾನದಲ್ಲಿ ಹೆಚ್ಚಿನ ಅಭಿರುಚಿ ಇದ್ದರೆ, ಕೆಲವರಿಗೆ ಕಲಾ ವಿಭಾಗದಲ್ಲಿ ಆಸಕ್ತಿ. ಮಕ್ಕಳ ಅಭಿರುಚಿಯನ್ನವಲಂಬಿಸಿ ಆಯಾ ವಿಷಯಗಳಲ್ಲಿಯೇ ಅವರನ್ನು ತೊಡಗಿಸಬೇಕು.

೩) ಕೆಲವರಲ್ಲಿರುವ ಶಾರೀರಿಕ ನ್ಯೂನತೆಯು ಕಾರಣದಿಂದ ಇತರರು ಅವರನ್ನು ಅಪಹಾಸ್ಯ ಮಾಡದಂತೆ ಶಿಕ್ಷಕರು ಲಕ್ಷ್ಯವಿರಿಸಬೇಕು. ಸದಾಚಾರ ಮತ್ತು ಸದ್ವ್ಯವಹಾರ ಗಳನ್ನು ಚಿಕ್ಕ ವಯಸ್ಸಿನಿಂದಲೇ ಕಲಿಸಬೇಕಾದುದಗತ್ಯ.

೪) ಮಕ್ಕಳಿಗೆ ಯಾವುದೇ ವಿಷಯವನ್ನು ಬೇಗ ಗ್ರಹಿಸಲಿಲ್ಲವಾದರೆ ಅವರನ್ನು "ದಡ್ಡ", ಮೂರ್ಖ, ಇತ್ಯಾದಿ ಉಪಾಧಿಗಳಿಂದ ವಿಭೂಷಿತರನ್ನಾಗಿಸುವುದು ತಪ್ಪು. ಇದರಿಂದ ಅವರಲ್ಲಿರುವ ಆತ್ಮವಿಶ್ವಾಸ ನಾಶವಾಗುತ್ತದೆ.

೫) ಬುದ್ಧಿವಂತ ಮಕ್ಕಳನ್ನು ಪ್ರಶಂಸಿಸುವಾಗ ಹಿಂದುಳಿದಿರುವ ಮಕ್ಕಳೊಂದಿಗೆ ತುಲನೆ ಮಾಡಬಾರದು. ಇದರಿಂದ ಬುದ್ಧಿವಂತರಿಗೆ ಅಹಂಕಾರವೂ, ಬುದ್ಧಿಹೀನರಿಗೆ ಕೀಳರಿಮೆಯೂ ಮೂಡುತ್ತದೆ. ಇದರಿಂದ ಪರಸ್ಪರರಲ್ಲಿ ದ್ವೇಷಾಸೂಯೆಗಳು ಬೆಳೆಯುತ್ತವೆ.

೬) ಪ್ರತಿಯೊಂದು ಸಮಯದಲ್ಲೂ ಮಕ್ಕಳಿಗೆ ಛೀಮಾರಿ ಹಾಕುತ್ತಿರುವುದರಿಂದ ಅವರ ಮನಸ್ಸು ಮುದುಡುತ್ತದೆ. ಸ್ವಲ್ಪ ಕಾಲದ ನಂತರ ಅವರು ನಿಮ್ಮ ಮಾತನ್ನು ಒಂದು ಕಿವಿಯಿಂದ ಕೇಳಿ ಮತ್ತೊಂದು ಕಿವಿಯಿಂದ ಬಿಡುತ್ತಾರೆ. ಹೇಳಿದ ಕೆಲಸವನ್ನು ಉದಾಸೀನ ದಿಂದ ಮಾಡುತ್ತಾರೆ. ಈ ಉದಾಸೀನವು ಕ್ರಮೇಣ ಗುರುಹಿರಿಯರ ಬಗೆಗೆ 'ಉದ್ಧಟತನ' ವೆನಿಸಿಕೊಳ್ಳುವಷ್ಟರ ಮಟ್ಟಿಗೆ ಮಿತಿ ಮೀರುತ್ತದೆ. ಈ ಪರಿಯ ಉದ್ಧಟತನದಿಂದ ಬೇಸತ್ತು ತಂದೆ ತಾಯಿಗಳೂ ಸಹ ಅವನನ್ನು 'ವಿಚಾರಿಸಿ' ಕೊಳ್ಳುವುದನ್ನು ನಿಲ್ಲಿಸುತ್ತಾರೆ. ಹೀಗಾಗಿ ಅವನು ಮನೆಯವರ ಮೇಲ್ವಿಚಾರಣೆಯಿಂದಲೂ ವಂಚಿತನಾಗುತ್ತಾನೆ; ತಿರಸ್ಕೃತನಾಗುತ್ತಾನೆ. ಇಂತಹ ದೃಷ್ಟಾಂತಗಳನ್ನಿಂದು ಮನೆ–ಮನೆಗಳಲ್ಲೂ ನೋಡಲು ಸಿಗುತ್ತವೆ. ಇದರಿಂದ ತಾಯಿ–ತಂದೆಯರಿಗೆ ಸದಾ ಕಾಲವೂ ದುಃಖವಾಗುವುದಲ್ಲದೆ, ಆ ಬಾಲಕನ ಭವಿಷ್ಯವೇ ಹುಡಿಗೂಡಿದಂತಾಗುತ್ತದೆ.

೭) ಅಸಫಲತೆಯು, ಸಫಲತೆಯ ಮೊದಲ ಮೆಟ್ಟಲು. ನಡೆಯುವವರೆಲ್ಲರೂ ಎಡವು ವುದು ಸಹಜ. ನಿಮ್ಮ ಮಕ್ಕಳು ಸೋತಾಗ ಅವರನ್ನು ಅಪಹಾಸ್ಯ ಮಾಡಬೇಡಿ. ಅವರ ಸಮಸ್ಯೆಗಳನ್ನು ಅರಿತುಕೊಳ್ಳಲು ಪ್ರಯತ್ನಿಸಿರಿ. ನಿಮ್ಮ ಬುದ್ಧಿವಂತಿಕೆ ಅವರ ನಿರ್ಬಲತೆ ಯನ್ನು ಎತ್ತಿತೋರಿಸಲಿಕ್ಕಲ್ಲ; ಅವರಿಗೆ ಜೀವನದಲ್ಲಿ ಹೆಚ್ಚಿನ ಯಶಸ್ಸು ಸಿಗುವಂತೆ ಪ್ರಯತ್ನಿ ಸುವುದಕ್ಕಾಗಿಯೇ ಇದೆ–ಎಂಬುದು ನೆನಪಿರಲಿ.

೮) ಮನೆಯ ಎಲ್ಲಾ ಮಕ್ಕಳೊಂದಿಗೆ ಒಂದೇ ರೀತಿಯ ವ್ಯವಹಾರವನ್ನಿಡಿರಿ. ಬುದ್ಧಿವಂತರೂ, ರೂಪವಂತರೂ ಆದ ಮಕ್ಕಳ ಮೇಲೆ ತಂದೆ-ತಾಯಂದಿರುಗಳಿಗೆ ವಿಶೇಷ ಅನುಗ್ರಹವಿರುತ್ತದೆ. ಅವರಿಗೆ ಒಳ್ಳೊಳ್ಳೆಯ ಬಟ್ಟೆಬರೆಗಳನ್ನೂ, ಅವರು ಬಯಸಿದ ವಸ್ತು ಗಳನ್ನೂ ತಂದುಕೊಡುವುದು ಸಾಮಾನ್ಯವಾಗಿದೆ. ಮಾತ್ರವಲ್ಲ ತಮ್ಮ ಮಕ್ಕಳನ್ನೇ 'ಮೂರ್ಖ', 'ದಡ್ಡ'–ಎಂಬುದಾಗಿ ಹೇಳಿ ಅಪಹಾಸ್ಯ ಮಾಡಿ ನಗುತ್ತಾರೆ. ಈ ರೀತಿಯ ವ್ಯವಹಾರ ತುಂಬಾ ಬೆಲೆಯನ್ನು ಬೇಡುವಂತಹುದಾಗಿದೆ–ಎಂಬುದರ ಅರಿವು ಅವರಿಗಿರುವುದಿಲ್ಲ.

೯) ತಂದೆ ತಾಯಿಗಳು ತಮ್ಮ ಮಕ್ಕಳ ಅನುದಿನದ ನಡತೆಯ ಬಗೆಗೆ ಸಹ ಗಮನ ನೀಡುತ್ತಿರಬೇಕು. ಅವರಿಗೆ ಓಡಾಡುವುದು, ನಿಲ್ಲುವುದು, ಕುಳಿತುಕೊಳ್ಳುವುದು ಮುಂತಾ

ದುವುಗಳಲ್ಲಿ ಶಿಷ್ಟಾಚಾರವನ್ನು ಕಲಿಸಬೇಕು. ಶುಚಿತ್ವ, ಬೇಗ ಮಲಗಿ ಬೇಗ ಏಳುವುದು, ಸೂಕ್ತಸಮಯದಲ್ಲಿ ಸೂಕ್ತವಾದ ಕಾರ್ಯನಿರ್ವಹಣೆ-ಇವುಗಳ ಬಗೆಗೂ ನಾವು ಸಾಕಷ್ಟು ಗಮನವೀಯಬೇಕು.

೧೦) ಮಕ್ಕಳಿಗೆ ತಮ್ಮ ಮನೋಭಾವಗಳನ್ನು ವ್ಯಕ್ತಪಡಿಸುವ ಯೋಗ್ಯಮಾರ್ಗದ ಅರಿವೂ ಇರಬೇಕು. ಹಲ್ಲುಗಳನ್ನು ಮಸೆಯುತ್ತಾ, ಕಣ್ಣುಗಳನ್ನು ಅಗಲವಾಗಿ ತೆರೆದು, ಮುಷ್ಟಿಯನ್ನು ಬಿಗಿಹಿಡಿದು ತನ್ನ ಕೋಪವನ್ನು ವ್ಯಕ್ತಪಡಿಸುವುದಾಗಲಿ, ಜೋರಾಗಿ ಅಳುತ್ತಾ ತನ್ನ ದುಃಖವನ್ನು ವ್ಯಕ್ತಪಡಿಸುವುದಾಗಲಿ ಸಭ್ಯತೆಯ ರೇಖೆಯನ್ನು ಮೀರುವುದಾಗಿರುತ್ತದೆ. ಆದುದರಿಂದ ಇತರರಿಗೆ ಮೆಚ್ಚುಗೆಯಾಗುವಂತೆ ತಮ್ಮ ಭಾವನೆಗಳನ್ನು ವ್ಯಕ್ತಪಡಿಸುವುದನ್ನು ಕಲಿಸಬೇಕು. ಇದರಿಂದ ಅವರ ವ್ಯಕ್ತಿತ್ವ ಆಕರ್ಷಕವಾಗುವುದಲ್ಲದೆ ಇತರರನ್ನು ಪ್ರಭಾವಿತಗೊಳಿಸಬಲ್ಲುದು.

ಮಕ್ಕಳ ಪೋಷಕರು ಈ ವಿಷಯಗಳನ್ನು ಗಮನದಲ್ಲಿರಿಸಿ ಮುಂದುವರಿದರೆ ಆ ಮಕ್ಕಳು ಯಶಸ್ವೀವ್ಯಕ್ತಿಗಳಾಗುವುದರಲ್ಲಿ ಸಂಶಯವಿಲ್ಲ.

---

# ಯುವಾ ಶಕ್ತಿಯ ಕರೆ

**(ಪಂ. ಕ್ಷಿತೀಶ ವೇದಾಲಂಕಾರ,** ಸಂಪಾದಕ–ಆರ್ಯಜಗತ್, ನವದೆಹಲಿ)

ಶೈಶವ, ಯೌವನ ಮತ್ತು ವಾರ್ಧಕ್ಯವೆಂದು ಮಾನವ–ಜೀವನದ ಮೂರು ಸ್ಥಿತಿಗಳಿವೆ. ಈ ಮೂರೂ ಸ್ಥಿತಿಗಳ ಪರಿಭಾಷೆಯನ್ನು ಒಬ್ಬ ಸಂತರು ಈ ರೀತಿ ಮಾಡಿರುವರು— 'ಬಾಲ್ಯದೆದುರಿನಲ್ಲಿ ಬರೇ ಭವಿಷ್ಯವಿರುತ್ತದೆ, ಯೌವನದೆದುರಿನಲ್ಲಿ ಬರೇ ವರ್ತಮಾನಕಾಲವಿರುತ್ತದೆ ಮತ್ತು ವಾರ್ಧಕ್ಯವು ಬರೇ ಭೂತಕಾಲದ ಮೇಲೆ ನಿಂತಿದೆ.' ಆದುದರಿಂದಲೇ ಮಕ್ಕಳ ಕಣ್ಣುಗಳಲ್ಲಿ ಆಶೆ ಆಕಾಂಕ್ಷೆಗಳ ಸ್ವರ್ಣಸ್ವಪ್ನಗಳಿರುತ್ತವೆ. ಯುವಕರ ವಾಣಿಯಲ್ಲಿ ಉತ್ಸಾಹ ಮತ್ತು ಆಕ್ರೋಶವಿರುತ್ತದೆ. ಮತ್ತು ಮುದುಕರ ಹೃದಯಗಳಲ್ಲಿ ಯಾವಾಗಲೂ ಅತೀತದ ಗೀತೆಗಳು ಮುಖರವಾಗುತ್ತವೆ. ವರ್ತಮಾನಕಾಲವು ನಿರಾಶಾಮಯ ಹಾಗೂ ಭವಿಷ್ಯವು ಅಂಧಕಾರಮಯವಾಗಿ ಕಾಣಿಸುತ್ತಿದೆ ಅವರಿಗೆ.

ಯಾವುದೇ ರಾಷ್ಟ್ರದ ವರ್ತಮಾನಕಾಲವು ಅವರ ಯುವಕರನ್ನು ಹೊಂದಿಕೊಂಡಿರುತ್ತದೆ. ಇಂದು ಇಡೀ ಜಗತ್ತಿನ ಯುವಾ ಪೀಳಿಗೆ ದಿಶಾಹೀನತೆಯ ವಾತಾವರಣದಲ್ಲಿ ಉಸಿರಾಡುತ್ತಿದೆಯಾದುದರಿಂದಲೇ ವಿಶ್ವದ ವರ್ತಮಾನವು ದಿಶಾಹೀನವಾಗಿಬಿಟ್ಟಿವೆ.

ಯುವಾ ಪೀಳಿಗೆ ಶಕ್ತಿಪುಂಜವಾಗಿರುತ್ತದೆ. ಸೈನ್ಯದಲ್ಲಿ, ಹೊಲಗದ್ದೆಗಳಲ್ಲಿ, ಕಾರ್ಖಾನೆಗಳಲ್ಲಿ ಮತ್ತು ಯತ್ರತತ್ರ ಸರ್ವತ್ರ ರಾಷ್ಟ್ರವನ್ನು ಶಕ್ತಿಶಾಲಿಯನ್ನಾಗಿಯೂ, ಸಮೃದ್ಧವನ್ನಾಗಿಯೂ ಮಾಡುವ ಉಪಕ್ರಮಗಳ ಬೆನ್ನಹಿಂದೆ ಯುವಾ ಪೀಳಿಗೆಯ ಬೆವರು–ನೆತ್ತರುಗಳೇ ಇವೆ. ಇಂದಿನ ಯುವಾ ಪೀಳಿಗೆ ದಿಕ್ಕೆಟ್ಟಿರುವುದಾದರೆ ಅದು ಅದರ ದೋಷವಲ್ಲ. ಅದರ ದೋಷವು ಪ್ರೌಢ ಪೀಳಿಗೆಯದ್ದಾಗಿದೆ. ಏಕೆಂದರೆ ಅವರೇ

ಯುವಕರನ್ನು 'ದೇಶದ ಕರ್ಣಧಾರ'ರೆಂದು ಕರೆದು ಅವರ ಶೋಷಣೆ ಮಾಡುತ್ತಿರುವರು. ಮತ್ತು ದೇಶದ ವರ್ತಮಾನವನ್ನು ಅಭೀಷ್ಟ ದಿಕ್ಕಿನತ್ತ ಕೊಂಡೊಯ್ಯಲು ಅಸಮರ್ಥರಾಗಿ ತಮ್ಮ ನೈತಿಕತಾ-ಶೂನ್ಯ ಆಚರಣದ ತಪ್ಪುತಪ್ಪಾದ ಉದಾಹರಣೆಗಳನ್ನು ಮುಂದಿಡುತ್ತಿದ್ದಾರೆ. ವೃಕ್ಷವನ್ನು ನಾವು ಯಾವಾಗಲೂ ಅದು ಕೊಡುವ ಹಣ್ಣಿನಿಂದ ಗುರುತಿಸುತ್ತೇವೆ. ಇಂದಿನ ಯುವಾ ಪೀಳಿಗೆಯು ದಿಶಾಹೀನವಾಗುವುದಕ್ಕೆ ಕಾರಣವು ಅದನ್ನು ಹುಟ್ಟಿಸಿದ ವೃಕ್ಷವೂ ಅಂತಹುದೇ ಆಗಿದೆ. ತಾವಾಗಿ ಪದೇ ಪದೇ ಅನುಶಾಸನವನ್ನು ಒಡೆಯುವ, ಭ್ರಷ್ಟಾಚಾರವನ್ನು ಒಂದೆರಡು ಅಪವಾದವನ್ನು ಬಿಟ್ಟು ನಿಯಮವನ್ನಾಗಿಯೇ ಮಾಡುವ ಪೂಜ್ಯವ್ಯಕ್ತಿಗಳು ಯುವಕರಿಗೆ ಅನುಶಾಸನದ ಹಾಗೂ ಭ್ರಷ್ಟಾಚಾರ-ಮುಕ್ತಿಯ ಉಪದೇಶವನ್ನೀಯುವುದನ್ನು ನೋಡಿ ಯುವಾ ಪೀಳಿಗೆ ನಗುತ್ತದೆ, ಹಾಗೂ ಮನಸ್ಸಿನಲ್ಲಿಯೇ 'ಪರೋಪದೇಶೇ ಪಾಂಡಿತ್ಯಂ' ಅವರನ್ನು ತಿರಸ್ಕಾರ ದೃಷ್ಟಿಯಿಂದ ಕಾಣುತ್ತಾರೆ. ತಮ್ಮ ಪೂಜ್ಯ ಜನದ ವಚನ ಮತ್ತು ಕಾರ್ಯಗಳಲ್ಲಿ ತಾರತಮ್ಯವನ್ನು ಕಾಣುವಾಗ ಯುವಕರಿಂದ ಅಪೇಕ್ಷಿಸಲ್ಪಡುವುದೆಲ್ಲವೂ ವ್ಯರ್ಥವಾಗಿಬಿಡುತ್ತದೆ.

ಇಂದು ವಿಶ್ವದ ಎಲ್ಲಾ ದೇಶಗಳ ಯುವಾ-ಶಕ್ತಿಯು ತನ್ನನ್ನು ಗುರುತಿಸಹತ್ತಿದೆ. ರಾಜನೀತಿಕ ಚೈತನ್ಯದೊಂದಿಗೆ ಅದರಲ್ಲಿ ಆತ್ಮಚೈತನ್ಯವೂ ಬಂದುಬಿಟ್ಟದೆ. ಯುವಾ ಶಕ್ತಿಯಿಂದು ಇಂದಿನ ವ್ಯವಸ್ಥೆಯ ಮೇಲೆ ವಿದ್ರೋಹಗೈದು ಕಹಳೆಯೂದಿ ಮುಂದುವರಿಯಬಯಸುತ್ತಿದೆ, ಅಲ್ಲೋಲ ಕಲ್ಲೋಲ ಮಾಡಬಯಸುತ್ತಿದೆ. ಪರಿವರ್ತನೆಗೂ, ಕ್ರಾಂತಿಗೂ ಆಹ್ವಾನವೀಯುತ್ತಿದೆ. ಕ್ರಾಂತಿಗಾಗಿ ಅತಿ ಹೆಚ್ಚು ತ್ಯಾಗವನ್ನೂ ಮಾಡಲು ಸಿದ್ಧವಿದೆ. 'ಮಹಾ ಅನಲವೆ! ಒಂದು ಬಾರಿ ಕಿಡಿ ಹಾರಿಸು' ಎಂಬ ಗುಜರಾತೀ ಕವಿಯ ಉಕ್ತಿಯು ಆತನ ಧ್ಯೇಯ ವಾಕ್ಯವಾಗಿದೆ. ಅಗ್ನಿಸ್ವರೂಪ, ಅಗ್ನಿಪುಂಜ ಪರಮಾತ್ಮನೊಡನೆ ಅಗ್ನಿಯನ್ನು ಯಾಚಿಸುತ್ತಾನೆ. ಈ ಅಗ್ನಿಯ ಯಾಚನೆಯೇ ಸೃಷ್ಟಿಯ ಆದಿಮಾನವನ ಸರ್ವಪ್ರಥಮ ಪ್ರಾರ್ಥನೆಯಾಗಿತ್ತು. ಆದಕಾರಣವೇ ಋಗ್ವೇದದ ಪ್ರಥಮ ಮಂತ್ರವು **ಅಗ್ನಿಮೀಳೇ ಪುರೋಹಿತಂ** ಎಂಬಲ್ಲಿಂದ ಪ್ರಾರಂಭವಾಗುತ್ತದೆ. ಆದರೆ, ಸೃಷ್ಟಿಯ ಆದಿ ಋಷಿಯ ಅಗ್ನಿ-ಯಾಚನೆಯು ಮಾನವಜೀವನವನ್ನು ಅಗ್ರಣೀಯನ್ನಾಗಿ ಮಾಡಲಿಕ್ಕಾಗಿತ್ತು. ಆದರೆ ಇಂದಿನ ಯುವಾ-ಪೀಳಿಗೆಯ ಪ್ರಾರ್ಥನೆ ಮಾನವ ಜೀವನವನ್ನು ಮಣ್ಣುಗೂಡಿಸಲಿಕ್ಕಾಗಿದೆ. ಇಲ್ಲದಿದ್ದಲ್ಲಿ ಪರಮಾಣು ಮತ್ತು ಉದ್ಜನ ಬಾಂಬುಗಳ ಭಂಡಾರಗಳೇಕೆ? ರೈಲುಗಳು, ಬಸ್ಸುಗಳು, ಕಾರ್ಖಾನೆಗಳು ಹಾಗೂ ಭವ್ಯಭವನಗಳಿಗೆ ಬೆಂಕಿಯಿಡುವ ಕಾರ್ಯವೇಕೆ? ಅಗ್ನಿ-ಉಪಾಸನೆಯನ್ನು ಗೈದು ತಾನು ಕ್ರಾಂತಿಕಾರಿಯಾಗುತ್ತಿದ್ದೇನೆಂಬ ಪೊಳ್ಳು ಭಾವನೆ ಇಂದಿನ ಯುವಕನ ತಲೆಬುರುಡೆಯಲ್ಲಿ ಮನೆಮಾಡಿಕೊಂಡಿದೆ.

ಕ್ರಾಂತಿ ಮತ್ತು ವಿಧ್ವಂಸ-ಎರಡೂ ಶಬ್ದಗಳು ಪರ್ಯಾಯವಾಚಿಯಾಗಿಲ್ಲ. ವಿಧ್ವಂಸವನ್ನೇ ಕ್ರಾಂತಿಯೆಂದು ತಿಳಿದಿರುವುದು ಇಂದಿನ ಯುವಾ ಶಕ್ತಿಯ ದಿಶಾಹೀನತೆಯ ಮುಖ್ಯ ಕಾರಣವಾಗಿದೆ. ಇಂದಾದರೋ ಶಾಂತಿ ಶಬ್ದದಷ್ಟೇ ಕ್ರಾಂತಿ ಶಬ್ದವು ರಾಜನೀತಿಯಲ್ಲಿ ಭ್ರಾಮಕವಾಗಿಬಿಟ್ಟಿದೆ. ಕ್ರಾಂತಿ ಮತ್ತು ಶಾಂತಿ ಇವೆರಡು ಶಬ್ದಗಳ ಬೇರೆ ಬೇರೆ ವರ್ಗಗಳನ್ನು ತಯಾರಿಸಿರುವರು. ಕ್ರಾಂತಿಯಲ್ಲಿ-ಸಮಗ್ರಕ್ರಾಂತಿ, ಪೂರ್ಣಕ್ರಾಂತಿ ಮತ್ತು

ಸಂಪೂರ್ಣಕ್ರಾಂತಿ ಇತ್ಯಾದಿ. ಶಾಂತಿಯಲ್ಲಿ–ಆಧ್ಯಾತ್ಮಿಕಶಾಂತಿ, ಔದ್ಯೋಗಿಕಶಾಂತಿ, ಶ್ರಮಿಕ ಶಾಂತಿ, ಸಾಮ್ರಾಜ್ಯವಾದಿಶಾಂತಿ, ಸಮಾಜವಾದೀಶಾಂತಿ ಮತ್ತು ಸ್ಮಶಾನಶಾಂತಿ–ಇತ್ಯಾದಿ. ವಿಧ್ವಂಸವನ್ನು ಕ್ರಾಂತಿಯೆಂದು ಭಾವಿಸುವುದು ತಪ್ಪು.

ಕ್ರಾಂತಿಯು ಯಾವಾಗಲೂ ರಚನಾತ್ಮಕವಾಗಿರುತ್ತದೆ ಅಥವಾ ಆಗಿರಬೇಕು. ಒಂದು ಹಳಕು ಮುರುಕು ಭವನವನ್ನು ಕೆಡವಿ ಮಣ್ಣುಗುಡ್ಡೆಯನ್ನು ಮಾಡುವುದು ವಿಧ್ವಂಸವೇ ಹೊರತು ಕ್ರಾಂತಿಯಲ್ಲ. ಆ ಭವನವನ್ನು ಕೆಡಹುವ ಮೊದಲು ಕುಶಲ ವಾಸ್ತುಶಿಲ್ಪಿಯ ಮೂಲಕ ತನ್ನ ಮನಸ್ಸಿನ ಹಾಗೂ ಆವಶ್ಯಕತೆಗೆ ಅನುರೂಪವಾದ ಹೊಸಭವನದ ರೂಪರೇಷೆಯನ್ನು ಸಿದ್ಧಪಡಿಸಿದ ಮೇಲೆ ಹಿಂದಿನ ಭವನವನ್ನು ಕೆಡವಿ ರೂಪರೇಷೆಯನುಸಾರ ಹೊಸ ಭವನವನ್ನು ಕಟ್ಟಿಸಿರಿ. ಇದೇ ರಚನಾತ್ಮಕ ಕ್ರಾಂತಿಯು, ಈ ರಚನಾತ್ಮಕ ಕ್ರಾಂತಿಗಾಗಿಯೇ ನಾವು ಯುವಕರಿಗೆ ಕರೆ ಕೊಡುತ್ತಿದ್ದೇವೆ.

ಜಗತ್ತಿನ ಯುವ–ಪೀಳಿಗೆ ಶಕ್ತಿಪುಂಜವಾಗಿದ್ದೂ ದಿಶಾಹೀನವಾಗಿರಲು ಕಾರಣವೇನು ಗೊತ್ತೆ? ಅದರ ಹತ್ತಿರ ಕ್ರಾಂತಿಯ ಹೆಸರೇನೋ ಇದೆ. ಅಲ್ಲೋಲಕಲ್ಲೋಲವೆಸಗುವ ಹಾಗೂ ವ್ಯವಸ್ಥೆಯನ್ನು ಬದಲಾಯಿಸುವ ಹುಮ್ಮಸ್ಸೂ ಇದೆ. ಆದರೆ ಭವನವನ್ನು ಕೆಡುಹುವ ಮೊದಲು ಹೊಸದರ ನಕ್ಷೆ (Plan) ತಯಾರಿಸುವ ಎಚ್ಚರಿಕೆಯಿಲ್ಲ.

ಜಗತ್ತಿಗಿಂದು ಎಂತಹ ಮಾನವನ ಆವಶ್ಯಕತೆಯಿದೆಯೋ, ಯಾವನ ಮೂಲಕ ಜಗತ್ತಿನಲ್ಲಿ ಸುಖ–ಶಾಂತಿ–ಸಮೃದ್ಧಿಯ ಆಕಾಂಕ್ಷೆಯನ್ನು ನಾವು ಮಾಡಬಲ್ಲೆವೋ ವರ್ಗಭೇದ, ವರ್ಣಭೇದ, ಬಣ್ಣಭೇದ, ಜಾತಿಭೇದ ಮತ್ತು ದೇಶಭೇದಗಳಿಂದ ಮೇಲೆದ್ದು ಯಾವನು ಆದರ್ಶ ವಿಶ್ವಮಾನವನ ಭೂಮಿಕೆಯನ್ನು ತಯಾರಿಸಬಲ್ಲನೋ ಆ ಆದರ್ಶ ವಿಶ್ವಮಾನವನ ನಿರ್ಮಾಣದ ನಕ್ಷೆಯನ್ನು ತೋರಿಸುತ್ತದೆ. ವೈದಿಕಧರ್ಮ-ಕ್ರಾಂತದರ್ಶೀ ಮಹರ್ಷಿ ದಯಾನಂದ ಸರಸ್ವತಿಯವರು ತಮ್ಮ ಅಮರಗ್ರಂಥವಾದ 'ಸತ್ಯಾರ್ಥಪ್ರಕಾಶ'ದ ಮೂಲಕ ಆ ನಕ್ಷೆಯ ಪ್ರತಿಯೊಂದು ಭಾಗವನ್ನು ಸ್ಪಷ್ಟಪಡಿಸುತ್ತಾರೆ.

ಆರ್ಯವೀರರೇ! ಈ ನಕ್ಷೆಗೆ ಅನುಸಾರವಾಗಿ ವಿಶ್ವವೆಂಬ ಪ್ರಾಸಾದ ನಿರ್ಮಾಣದ ಉತ್ತರದಾಯಿತ್ವ ನಿಮ್ಮ ಮೇಲಿದೆ. ದಿಕ್ಕುಕೆಟ್ಟ ಯುವಾ ಪೀಳಿಗೆಗೆ ಸರಿಯಾದ ದಾರಿ ತೋರಿಸಿರಿ, ನವಮಾನವನ ನಿರ್ಮಾಣ ಮಾಡಿರಿ. ರಚನಾತ್ಮಕ ಕ್ರಾಂತಿಯ ಕಹಳೆಯನ್ನೂದಿರಿ—

**ಉತ್ತಿಷ್ಠತ ಸನ್ನಹ್ಯಧ್ವಮುದಾರಾಃ ಕೇತುಭಿಃ ಸಹ ।** (ಅಥರ್ವ ೧೧–೧೦–೧)

ಎದ್ದೇಳಿ, ಸಿದ್ಧರಾಗಿರಿ, ಓಂ ಪತಾಕೆಯನ್ನು ಕೈಯಲ್ಲಿ ಹಿಡಿದುಕೊಂಡು ಹೃದಯದಲ್ಲಿ ವಿಶಾಲತ್ವವನ್ನಿಟ್ಟುಕೊಂಡು ಮುಂದುವರಿಯಿರಿ.

ಇಡೀ ಜಗತ್ತಿನ ಶ್ರೇಷ್ಠ ಪುರುಷರಿಂದು ಅಲ್ಲಿ ಇಲ್ಲಿ ಚದರಿಹೋಗಿರುವರು. ದುಷ್ಟರೆಲ್ಲರೂ ಸಂಘಟಿತರಾಗಿರುವರು. ಈ ಕ್ರಮವನ್ನು ಬುಡಮೇಲಾಗಿ ಮಾಡಿ ಶ್ರೇಷ್ಠ ಪುರುಷರನ್ನು ಐಕ್ಯಮತ್ಯದದಾರದಲ್ಲಿ ಪೋಣಿಸಿರಿ. ವೇದದ **ಕೃಣ್ವಂತೋ ವಿಶ್ವಮಾರ್ಯಂ** ಎಂಬ ಆದೇಶದ ಪಾಲನೆ ಮಾಡುವ ಉಪಾಯವು ಇದೇ ಆಗಿದೆ.

ಇಂದಿನ ಯುವಾ ಶಕ್ತಿಯ ಮೂಲಕ ಇದನ್ನೇ ಕೋರುತ್ತೇವೆ.

---

# ನಾರಿಯ ಆದರ್ಶ ಸ್ವರೂಪ

(ಶ್ರೀಮತಿ ಗೀತಾದೇವೀ ಶಾಸ್ತ್ರೀ, ವೇದಶಿರೋಮಣಿ, ನವದೆಹಲಿ)

ವೇದಗಳು ನಾರಿಗೆ ಸಾಮಾಜಿಕ ಜೀವನದಲ್ಲಿ ಉಚ್ಚ ಸ್ಥಾನವನ್ನಿತ್ತಿರುವವು. ಪತ್ನಿ ಮತ್ತು ಪತಿ-ಇಬ್ಬರಿಗೂ ಬರುವ ಒಂದು ಶಬ್ದ **ದಂಪತಿ** ಎಂಬುದಕ್ಕೆ ಮನೆಯ ಇಬ್ಬರು ಒಡೆಯರು ಎಂಬರ್ಥವಾಗುತ್ತದೆ. ತಾತ್ಪರ್ಯವಿಷ್ಟೇ ಯಾರೂ ಕಡಿಮೆಯಲ್ಲ ಯಾರೂ ದಾಸ ಅಥವಾ ದಾಸಿಯಲ್ಲ, ಇಬ್ಬರೂ ಸಮಾನ ಅಧಿಕಾರ ಹೊಂದಿರುತ್ತಾರೆ. ಯಜ್ಞದಂತಹ ಶ್ರೇಷ್ಠ ಕಾರ್ಯವನ್ನು ಪತಿಪತ್ನಿಯರಿಬ್ಬರೂ ಸೇರಿ ಪೂರ್ಣಗೊಳಿಸುತ್ತಾರೆ. ವೇದ ಜ್ಞಾನವನ್ನು ಪಡೆಯಲೂ ಸಮಾನವಾದ ಅಧಿಕಾರವಿದೆ. ವೇದ ಮಂತ್ರಗಳ ಋಷಿಗಳಿರುವುದಾದರೆ ಲೋಪಾಮುದ್ರಾ ಮೊದಲಾದ ಋಷಿಕೆಯರೂ ಇದ್ದಾರೆ. ವೇದದಲ್ಲಿ ಪತ್ನಿಯನ್ನು ಮನೆಯ ಕೋಶ (ಖಜಾನೆ)ಎಂದು ಹೇಳಿದ್ದಾರೆ—

**ಉಪಸಿತಸ್ಯ ತೇ ಬ್ರಹ್ಮಣಾ ಕಶ್ಯಪಸ್ಯಗಯಸ್ಯ ಚ।**
**ಅಂತಃಕೋಶಮಿವ ಜಾಮಯೋಽಪಿ ನಹ್ಯಾಮಿ ತೇ ಭಗಂ॥**

ಬಂಧನರಹಿತ, ಸರ್ವದ್ರಷ್ಟಾ, ಸರ್ವಜ್ಞ ಹಾಗೂ ಸರ್ವಾಧಾರ ಪರಮಾತ್ಮನ ವೇದಜ್ಞಾನದೊಂದಿಗೆ ನಿನ್ನಲ್ಲಿ ಭಗ ಅಂದರೆ ಸರ್ವ ವಿಧವಾದ ಐಶ್ವರ್ಯಗಳನ್ನು ಕಟ್ಟುತ್ತೇನೆ. ಸ್ತ್ರೀಯರು ಮನೆಯಲ್ಲಿ ಖಜಾನೆಯಂತಿದ್ದಾರೆ.

ಪತ್ನಿಯೇ ವೇದದ ಕಲ್ಯಾಣೀ ವಾಣಿಯನ್ನು ಮನೆಯ ಮೂಲೆ ಮೂಲೆಗಳಲ್ಲಿ ಪ್ರತಿಧ್ವನಿಸುವಂತೆ ಮಾಡುತ್ತಾಳೆ. ಅಂದರೆ, ನಿಜವಾಗಿ ಪತ್ನಿಯೇ ಪ್ರಾತಃಕಾಲ ಸಾಯಂಕಾಲ ಗಳಲ್ಲಿ ವೇದವಾಣಿಯನ್ನುಚ್ಚರಿಸುವ ಪವಿತ್ರ ಕರ್ತವ್ಯವನ್ನು ನಿರ್ವಹಿಸುತ್ತಾಳೆ. ಆದಕ್ಕಾಗಿಯೇ ವೇದ ಹೇಳುತ್ತಿದೆ—

**ಬ್ರಹ್ಮಾಪರಂ ಯುಜ್ಯತಾಂ ಬ್ರಹ್ಮಪೂರ್ವಂ**
**ಬ್ರಹ್ಮಾಂತತೋ ಮಧ್ಯತೋ ಬ್ರಹ್ಮ ಸರ್ವತಃ।**
**ಅನಾವ್ಯಾಧಾಂ ದೇವಪುರಾಂ ಪ್ರಪದ್ಯ**
**ಶಿವಾ ಸ್ಯೋನಾ ಪತಿಲೋಕೇ ವಿರಾಜ॥** [ಅಥರ್ವ: ೧೪-೧-೬೪]

ವೇದವನ್ನು ಪಶ್ಚಿಮದಲ್ಲಿ, ಪೂರ್ವದಲ್ಲಿ, ಕೊನೆಯಲ್ಲಿ, ಮಧ್ಯದಲ್ಲಿ ಹಾಗೂ ಎಲ್ಲೆಡೆ ಗಳಲ್ಲಿಡಿರಿ. ವ್ಯಾಧಿ ಅಥವಾ ರೋಗರಹಿತವಾದ ಈ ದೇವಪುರಿ ಅಂದರೆ ದೇವಗೃಹದಲ್ಲಿದ್ದು ಕಲ್ಯಾಣಕಾರಿಣಿಯೂ. ಸುಖದಾಯಿನಿಯೂ ಆಗಿ ಹೇ ಪತ್ನಿಯೇ! ನೀನು ನಿನ್ನ ಗುಣಗಳ ಮೂಲಕ ಪತಿಗೃಹದಲ್ಲಿ ಸದಾ ಬೆಳಕನ್ನು ಬೀರುತ್ತಿರು,

ವಿದ್ವಾಂಸ ಪುರುಷರು ಯಜ್ಞದ ಬ್ರಹ್ಮತ್ವವನ್ನು ವಹಿಸುವಂತೆ ವಿದುಷೀ ಸ್ತ್ರೀಯರೂ ಬ್ರಹ್ಮತ್ವವನ್ನು ವಹಿಸುತ್ತಾರೆ. ಈ ವಿಷಯದಲ್ಲಿ ವೇದವು ನಮಗೆ ಆದೇಶವೀಯುತ್ತಿದೆ—

**ಅಧಃ ಪಶ್ಯಸ್ವ ಮೋಪರಿ ಸಂತರಾಂ ಪಾದಕೌ ಹರ।**
**ಮಾತೇ ಕಶಪ್ಲಕೌ ದೃಶನ್ ಸ್ತ್ರೀ ಹಿ ಬ್ರಹ್ಮಾ ಬಭೂವಿಥ॥**

[ಋಕ್ ೮-೩೩-೧೯]

ಹೇ ನಾರಿಯೇ! ಮೇಲೆ ನೋಡದೆ ಕೆಳಗೆ ನೋಡುತ್ತಾ ಸಭ್ಯತಾಪೂರ್ವಕ ಚರಣಗಳನ್ನೂರಿ ಸರಿಯಾಗಿ ನಡೆಯು. ನಿನ್ನ ಶರೀರವು ಯುಕ್ತ ರೀತಿಯಲ್ಲಿ ಆವೃತವಾಗಿರಲಿ. ಜ್ಞಾನಸಂಪನ್ನಳಾಗಿ ಇಂತಹ ಶಿಷ್ಟ ವ್ಯವಹಾರ ಮಾಡುವುದರಿಂದ ನೀನು ಬ್ರಹ್ಮಪದಕ್ಕೆ ಯೋಗ್ಯಳಾಗಬಲ್ಲೆ.

ವೇದವು ಸ್ತ್ರೀಯ ರೂಪಕ್ಕೆ ಎಷ್ಟೊಂದು ಸುಂದರವಾಗಿ ಕಳೆಕಟ್ಟಿದೆ! ವಿದುರನೀತಿಯೂ ಸಹ ಸ್ತ್ರೀಗೆ ಯುಕ್ತವಾದ ಸನ್ಮಾನವಿತ್ತಿದೆ—

**ಪೂಜನೀಯಾ ಮಹಾಭಾಗಾಃ ಪುಣ್ಯಾಶ್ಚ ಗೃಹದೀಪ್ತಯಃ ।**
**ಸ್ತ್ರಿಯಃ ಶ್ರಿಯೋ ಗೃಹಸ್ಯೋಕ್ತಾಸ್ತಸ್ಮಾದ್ರಕ್ಷ್ಯಾ ವಿಶೇಷತಃ ॥**

ಸ್ತ್ರೀಯನ್ನು ಲಕ್ಷ್ಮಿ ಯೆಂದಿದ್ದಾರೆ. ಸ್ತ್ರೀಯರು ಅತ್ಯಂತ ಸೌಭಾಗ್ಯಶಾಲಿನಿಯರೂ, ಪೂಜಾ ಯೋಗ್ಯರೂ, ಪವಿತ್ರರೂ, ಗೃಹದೀಪ್ತಿ-ಶೋಭೆಯೂ ಆಗಿರುವಳು. ಆದುದರಿಂದ ಅವರನ್ನು ವಿಶೇಷವಾಗಿ ರಕ್ಷಿಸಬೇಕು.

ಸ್ತ್ರೀಯು ಮುಳ್ಳಿನ ಪೊದರಿನಲ್ಲಿ ಹೂವನ್ನರಳಿಸುತ್ತಾಳೆ. ಅತ್ಯಂತ ನಿರ್ಧನ ಮಾನವನ ಮನೆಯನ್ನೂ ಸಹ ಸುಶೀಲ ಹಾಗೂ ಸ್ವರ್ಗವನ್ನಾಗಿ ಮಾಡುತ್ತಾಳೆ.

ಪತ್ನಿಯಂತಹ ತೀರ್ಥವಿಲ್ಲ, ಪತ್ನಿಯಂತಹ ಸುಖ ಇನ್ನೊಂದಿಲ್ಲ. ಸಂಸಾರ ಸಾಗರವನ್ನು ಪಾರುಗಾಣಬೇಕಾದರೆ ಮತ್ತು ಕಲ್ಯಾಣವನ್ನು ಸಾಧಿಸಬೇಕಾದರೆ ಪತ್ನಿಯಂತಹ ಪುಣ್ಯ ಬೇರೊಂದಿಲ್ಲವೆಂದು ಪದ್ಮ ಪುರಾಣದಲ್ಲಿ ಹೇಳಿದೆ.

ನಿಜವಾಗಿ ಹೇಳಬೇಕಾದರೆ, ನಾರಿಯ ಮೂಲಕವೇ ಸಭ್ಯ ಸುಸಂಸ್ಕೃತ ಸಮಾಜದ ಮತ್ತು ರಾಷ್ಟ್ರದ ನಿರ್ಮಾಣವಾಗುತ್ತದೆ. ಆರ್ಯ ಸಮಾಜದ ಪ್ರವರ್ತಕರಾದ ಮಹರ್ಷಿ ದಯಾನಂದ ಸರಸ್ವತಿಯವರು ನಾರಿಯ ಸ್ವರೂಪವನ್ನೊಂದು ಉನ್ನತ ಧರಾತಳದಲ್ಲಿ ತಂದು ನಿಲ್ಲಿಸಿದರು. ಇದರಿಂದ ದೇಶದೇಶಾಂತರಗಳ ಜನರು ಯಾವಾಗಲೂ ಪ್ರೇರಣೆಯನ್ನು ಪಡೆಯಬಲ್ಲರು.

---

# ಮಾಂಸಾಹಾರ ವರ್ಜ್ಯವೇಕೆ?

**● ನಾರಾಯಣ ಕೇಳತ್ತಾಯ-**

ಮಾನವ ತನ್ನ ಔನ್ನತ್ಯವನ್ನು ಮೆರೆಯಿಸಿಕೊಂಡು ಸುಸಂಸ್ಕೃತನಾಗಬೇಕಾದರೆ ಹಲವು ನಿರ್ದಿಷ್ಟ ಹಾಗೂ ಅನಿವಾರ್ಯ ನಿಬಂಧನೆಗೊಳಪಡಬೇಕಾಗುತ್ತದೆ. ತನ್ನ ಸಾಧನೆಯಲ್ಲಿ ಎದುರುಗೊಳ್ಳುವ ಅನೇಕ ಪರಿಪಂಥಿಗಳನ್ನು ನಿವಾರಿಸಿಕೊಂಡು ಮುಂದುವರಿಯಬೇಕಾದರೆ ಆತನಲ್ಲಿ ತಕ್ಕಷ್ಟು ಆತ್ಮಬಲ ಸಂಚಿತವಾಗಿರಬೇಕಾಗುತ್ತದೆ. ಆತ್ಮಬಲ ಸಂಚಯನ, ನಿಷ್ಕಳಂಕ ಉದಾರಧೀರ ಮನೋಧರ್ಮವನ್ನು ಪ್ರಾಪ್ತಿಸಿಕೊಂಡ ನಂತರವೇ ಸಿದ್ಧಿಸಬಲ್ಲುದು. ಇಂತಹ ಮನೋಧರ್ಮವನ್ನು ಸಾಧಿಸಿಕೊಳ್ಳುವುದು ಅಭ್ಯಂತರ ಶೌಚ ಅಂದರೆ ಮಾನಸಿಕ, ವಾಚಕ ಹಾಗೂ ಕಾಯಶುದ್ಧಿಯ ಸಿದ್ಧಿಯಿಂದ ಮಾತ್ರ ಸಾಧ್ಯವಾಗುತ್ತದೆ.

ಅಭ್ಯಂತರ ಶೌಚವೇನೋ ಮಾನಸಿಕ ಹಾಗೂ ವಾಚಿಕ ಶುದ್ಧಿಯನ್ನೇ ನೇರವಾಗಿ ಅವಲಂಬಿಸಿರುವುದಾದರೂ, ಬಾಹ್ಯ ಶೌಚವನ್ನು ಪರೋಕ್ಷವಾಗಿ ಅವಲಂಬಿಸಿರುತ್ತದೆ. ಮಾನಸಿಕ ಹಾಗೂ ವಾಚಿಕ ನಿರ್ಮಲತೆಯ ಸಿದ್ಧಿಯಲ್ಲಿ ಬಾಹ್ಯ ಅಂದರೆ ಆಹಾರ, ವಿಹಾರ, ಉಡುಗೆ ತೊಡುಗೆಗಳ ಸುನಿರ್ಮಲತೆಯ ಪಾತ್ರವೂ ಬಲು ಹಿರಿದು. ನಾವು ನಿರಂತರವೂ ಗೈಯುವ ಪ್ರತಿಯೊಂದು ಕ್ರಿಯೆಗಳೂ ನಮ್ಮ ಆತ್ಮದ ಮೇಲೆ ತಮ್ಮದೇ ಆದ ವಿಶಿಷ್ಟ ಸಂಸ್ಕಾರವನ್ನು ನಿರ್ಮಿಸುತ್ತದೆ ಎಂದೊಪ್ಪಿಕೊಂಡ ಮೇಲೆ ಆಹಾರವಿಹಾರಾದಿಗಳ ಪರಿಶುದ್ಧತೆಯೂ ಆಭ್ಯಂತರ ಶೌಚದ ಸಾಧನೆಯಲ್ಲಿ ಪಾತ್ರ ವಹಿಸುತ್ತದೆ ಎಂಬುದು ಸ್ಫುಟವಾಗುತ್ತದೆಯಲ್ಲವೇ?

ಇಷ್ಟು ವಿಷಯಗಳನ್ನು ಅವಗತಮಾಡಿಕೊಂಡ ಮೇಲೆ ಪ್ರಾಸಂಗಿಕವಾಗಿ ಪರ್ಯಾಲೋಚಿಸಿದಾಗ ಭುಂಜಿಸುವುದೇನನ್ನು? ಮತ್ತು ಭೋಜ್ಯ ವಸ್ತುವಿನ ಉಪಾರ್ಜನಾ ವಿಧಾನವೇನು? ಎಂಬ ಪ್ರಶ್ನೆಗಳು ಉದ್ಭವಿಸುತ್ತವೆ.

ಮೇಲಿನ ಸಮಸ್ಯೆಗಳನ್ನು ಪರಿಹರಿಸಲೋಸುಗ ಪೀಠಿಕಾರೂಪವಾಗಿ ಅಂದಿನ ಆಯುರ್ವೇದ ಶಾಸ್ತ್ರಕಾರರು ಏನನ್ನು ಹೇಳಿದ್ದಾರೆಂಬುದನ್ನು ವಿವೇಚಿಸೋಣ. ನಾವೆಸಗುವ ಪ್ರತಿಯೊಂದು ಕ್ರಿಯೆಗಳೂ ಆತ್ಮವನ್ನು ಸಂಸ್ಕರಿಸುವ ಸಾಧನಗಳು ಎಂದಾದ ಮೇಲೆ ಆಭ್ಯಂತರ ಶೌಚ ಸಾಧನೆಯ ದೃಷ್ಟಿಯಲ್ಲಿ ಆಹಾರ ವಸ್ತುವಿನ ಉಪಾರ್ಜನಾ ವಿಧಾನವೂ ನ್ಯಾಯವಿಹಿತವಾಗಿರಬೇಕಾದುದು ಅನಿವಾರ್ಯವಾಗುತ್ತದೆ. ಅದಕ್ಕೇ ವಾಗ್ಭಟನೆಂಬ ಆಯುರ್ವೇದ ಶಾಸ್ತ್ರಕಾರನ ಉದ್ಘೋಷಣೆ ತುಂಬಾ ಉಚಿತವೂ ಯುಕ್ತಿಯುಕ್ತವೂ ಮಾನನೀಯವೂ ಆಗಿದೆ. ಆತನ ಪ್ರಕಾರ ಹಿತಭುಕ್, ಮಿತಭುಕ್ ಎನ್ನುವುದರೊಂದಿಗೆ ಅಷ್ಟೇ ಮಹತ್ವವುಳ್ಳದ್ದಾಗಿರುವ ಋತಭುಕ್ ಎಂಬ ಪ್ರಧಾನ ನಿಯಮವೂ ಕಟ್ಟುನಿಟ್ಟಾಗಿ ಪಾಲಿಸಲ್ಪಡಬೇಕು. ಋತಭುಕ್ ಎನ್ನುವುದು ಆತ್ಮೋದ್ಧಾರದ ದೃಷ್ಟಿಯಲ್ಲಿ ಅಧಿಕ ಮೌಲ್ಯವುಳ್ಳದ್ದು. ಈಗ ಪ್ರಚಾರದಲ್ಲಿರುವ ಹಾಗೂ ಆಚರಣೆಯಲ್ಲಿ ಅನಿವಾರ್ಯವೆಂದೆನಿಸಿರುವ ಮಾಂಸಾಹಾರ ಸೇವನೆಯಲ್ಲಿ ಬಹುಪಾಲು ಈ ಋತಭುಕ್ ಎನ್ನುವ ನಿಬಂಧನೆ ಏಕೆ ಪಾಲಿಸಲ್ಪಡುವುದಿಲ್ಲ ಎಂಬುದನ್ನು ವಿವೇಚಿಸೋಣ. ಉಳಿದೆರಡು ನಿಯಮಗಳು, ಹಿತಭುಕ್ ಮತ್ತು ಮಿತಭುಕ್ ಎನ್ನುವುದು, ಹಿತವಾದುದನ್ನು ಮಿತವಾಗಿಯೂ ತಿನ್ನಬೇಕು ಎಂಬುದರಲ್ಲಿ ಮುಗಿಯುತ್ತದೆ.

ಸಾಮಾನ್ಯವಾಗಿ ಜಂತುಗಳನ್ನು ಆಹಾರಕ್ಕೋಸುಗವೇ ಕೊಂದು ಅವುಗಳ ಮಾಂಸವನ್ನು ಉಪಯೋಗಿಸಬೇಕಾಗುತ್ತದೆ. ಇದರಿಂದಾಗಿ ವನ್ಯ ಮೃಗಗಳ ಸಂತತಿಯ ನಿರ್ಮೂಲನ ಕ್ರಿಯೆಯೊಂದಿಗೆ ಪ್ರಾಕೃತಿಕ ಸಮತೋಲನ ಭಗ್ನವಾಗುತ್ತದೆ. ಸ್ವಾರ್ಥ ಪೂರ್ತಿಗಾಗಿ ಸಂತತಿ ನಷ್ಟದ ಹಾಗೂ ಹಿಂಸೆಯ ಪಾಪಕ್ಕೆ ಗುರಿಯಾಗಬೇಕಾಗುತ್ತದೆ. ಪರರ ಮೇಲೆ ನಡೆಯುವ ಹಿಂಸೆಯಿಂದ ತಾನು ತೃಪ್ತಿಪಟ್ಟುಕೊಂಡು ಆಹಾರದ ವಾಂಛೆಯನ್ನು ತೀರಿಸಿಕೊಳ್ಳುವ ಮಾನವನ ಆತ್ಮದಲ್ಲಿ ಸಹಜವಾಗಿಯೇ ಹಿಂಸೆಯ ಅನಿಷ್ಟ ಸಂಸ್ಕಾರದ ನಿಕಟ ಛಾಯೆ ಮುದ್ರಿತವಾಗುತ್ತದೆ. ಮೊದಲೇ ಸಿದ್ಧಪಡಿಸಿರುವ ಜಡವಾದ ಆಹಾರ ಸಾಮಾಗ್ರಿಯನ್ನೇ ಕದ್ದು ತಿನ್ನುವ ನಾಯಿ ಮೈಬಾಲಗಳನ್ನು ಮುದುಡಿಸಿಕೊಂಡು ಆತ್ಮವಂಚನೆಯ

ಕೆಟ್ಟ ಪರಿಸ್ಥಿತಿಯಲ್ಲಿ ಅಳುಕುತ್ತಾ ಅಂಜುತ್ತಾ ತಿನ್ನುತ್ತದೆ. ಆಹಾರ ಸೇವನೆಯಲ್ಲಿ ಋತು ನಿಯಮವನ್ನು ಪಾಲಿಸಿಲ್ಲ ಎನ್ನುವ ಅದರ ಅಂತರ್ವಾಣಿಯನ್ನು ಉಲ್ಲಂಘಿಸಿ ನಡೆದುದರ ಪರಿಣಾಮ ಅದರ ಅಳುಕಿನ ಭಂಗಿಯಲ್ಲಿ ವ್ಯಕ್ತವಾಗುತ್ತದೆ. ವಿವೇಕರಹಿತವಾದ ನಾಯಿಯೇ ಆ ಸ್ಥಿತಿಯಲ್ಲಿ ಚಡಪಡಿಸುತ್ತಿರುವಾಗ ಅಧಿಕಾರರಹಿತನಾಗಿದ್ದರೂ ಅಧಿಕಾರವಂತನಂತೆ ಬಲಾತ್ಕರಿಸಿ ಪ್ರಾಣಿಗಳನ್ನು ಹಿಂಸಿಸಿ ತನ್ನ ಹೊಟ್ಟೆ ತುಂಬಿಕೊಳ್ಳುವ ಮಾನವನ ಹೃದಯದ ನಿಷ್ಠುರತೆಯ ಮಟ್ಟವನ್ನು ಊಹಿಸಿಕೊಳ್ಳಬೇಕು. ಆದುದರಿಂದ ಮಾಂಸಾಹಾರ ಸೇವನೆಯಲ್ಲಿ ಆಹಾರದ ಉಪಾರ್ಜನೆ ಹಿಂಸಾದೋಷಯುತವಾದುದರಿಂದ ಋತಭುಕ್ ನಿಯಮ ಉಲ್ಲಂಘಿಸಲ್ಪಟ್ಟಿದೆ.

ಪ್ರಾಣಿಗಳ ಶರೀರದ ಮಾಂಸದಲ್ಲಿ ಅಧಿಕ ಪೋಷಕಾಂಶಗಳಿರುವುದಿಲ್ಲ. ಅವುಗಳ ಜೀವಿತದಿಂದ ಸಮಗ್ರಾಗುವ ಉಪಕಾರದ ಪರಿಮಾಣ ಅವುಗಳ ಹನನದ ನಂತರದಲ್ಲಿ ದಕ್ಕುವ ಲಾಭಕ್ಕಿಂತ ಎಷ್ಟೋ ಪಟ್ಟು ಹೆಚ್ಚಾಗಿರುತ್ತದೆ. ಅವುಗಳು ಮುದಿತನದಿಂದಲೋ ರೋಗ ರುಜಿನಗಳಿಂದಲೋ ನಿರುಪಯೋಗಿಯಾದರೂ ಕೂಡಾ ಅವುಗಳನ್ನು ಹಿಂಸಿಸುವುದು ಅನುಚಿತವಾಗುತ್ತದೆ.

ಮಾನವ ಸೇವಿಸುವ ಆಹಾರದ ಸೂಕ್ಷ್ಮತಮ ಅಂಶ ಮನಸ್ಸಾಗುತ್ತದೆ. ಆದುದರಿಂದ ಮನಸ್ಸಿನ ನಿರ್ಮಲತೆಯಲ್ಲಿ ಆಹಾರದ ಶುದ್ಧಿಯೂ ಪರಿಗಣಿಸಲ್ಪಡುತ್ತದೆ. ಮಾಂಸವನ್ನು ತಿನ್ನುವಾಗ ಮಸಾಲೆ ಬೆರೆಸಬೇಕಾಗುವುದರಿಂದ ಅದು ಅತ್ಯಂತ ಕಾಮೋತ್ತೇಜಕವೆನಿಸಲ್ಪಡುತ್ತದೆ. ಇದರಿಂದಾಗಿ ವಾಗ್ಭಟನ ಮೊದಲ ನಿಯಮವಾದ ಹಿತಭುಕ್–ಎಂದರೆ ಹಿತವಾದುದನ್ನೇ ತಿನ್ನು ಎಂಬುದೂ ನಿರ್ಲಕ್ಷಿಸಲ್ಪಡುತ್ತದೆ.

ಇವೇ ಅಲ್ಲದೆ ಮಾನವ ಮಾಂಸ ಭೋಜಿಯಲ್ಲ ಎನ್ನುವುದನ್ನು ಪ್ರತಿಪಾದಿಸುವ ಹಲವು ಪ್ರಾಕೃತಿಕ ಅಂಶಗಳನ್ನೂ ಅವಲೋಕಿಸೋಣ:—

1) ಮಾಂಸವನ್ನು ಹರಿದು ತಿನ್ನಲು ಅನುಕೂಲವಾಗುವಂತಹ ಹಲ್ಲಿನ ರಚನೆ ಮಾನವನಲ್ಲಿಲ್ಲ. ಕೋರೆ ಹಾಗೂ ಚೂಪಾದ ವಕ್ರದಂತ ಪಂಕ್ತಿಗಳು ಮಾಂಸಾಹಾರೀ ಜಂತುಗಳಲ್ಲಿ ಮಾತ್ರವಿದೆ.

2) ಮಾಂಸಾಹಾರೀ ಜಂತುಗಳ ಮೈಯಲ್ಲಿ ಬೆವರು ಸುರಿಯುವುದೇ ಇಲ್ಲ. ಸಸ್ಯಾಹಾರೀ ಜಂತುಗಳಲ್ಲಿ ಬೆವರುವಿಕೆಯನ್ನು ಕಾಣುತ್ತೇವೆ.

3) ಮಾಂಸಾಹಾರೀ ಜಂತುಗಳು ಸಂಭೋಗ ಕ್ರಿಯೆಯಲ್ಲಿ ಒಂದಕ್ಕೊಂದು ಅಂಟಿಕೊಳ್ಳುತ್ತವೆ. ಸಸ್ಯಾಹಾರೀ ಜಂತುಗಳಲ್ಲಿ ಸಂಭೋಗಕ್ರಿಯೆ ವಿಭಿನ್ನ ಮಟ್ಟದ್ದಾಗಿರುತ್ತದೆ.

4) ಮಾಂಸಾಹಾರೀ ಜಂತುಗಳ ಕರುಳು ಸಸ್ಯಾಹಾರೀ ಜಂತುಗಳ ಕರುಳಿಗಿಂತ ಉದ್ದದಲ್ಲಿ ಕಡಿಮೆಯಾಗಿರುತ್ತದೆ. ಏಕೆಂದರೆ ಶಾಕಭೋಜನವನ್ನು ಅರಗಿಸಲು ಕರುಳು ಉದ್ದವಾಗಿರಬೇಕಾದುದು ಅನಿವಾರ್ಯವಾಗಿರುತ್ತದೆ.

5) ಮಾಂಸಾಹಾರೀ ಜಂತುಗಳು ನೆಕ್ಕಿ, ನೆಕ್ಕಿ ಅಥವಾ ಚೀಪಿ, ಚೀಪಿ ನೀರನ್ನು ಕುಡಿಯುತ್ತವೆ. ಇದಕ್ಕೆ ಬದಲಾಗಿ ಸಸ್ಯಾಹಾರಿಗಳು ಗುಟುಕು-ಗುಟುಕಾಗಿ ನೀರನ್ನು ಕುಡಿಯುತ್ತವೆ.

6) ನಾಲಿಗೆಯ ರಚನೆಯಲ್ಲೂ ಮಾಂಸಾಹಾರಿಗಳಲ್ಲಿ ಮತ್ತು ಸಸ್ಯಾಹಾರಿಗಳಲ್ಲಿ ವ್ಯತ್ಯಾಸವನ್ನು ಗುರುತಿಸುತ್ತೇವೆ.

7) ಉಗುರಿನ ರಚನೆ ಮಾಂಸಾಹಾರಿಗಳದ್ದು ಮಾಸಾಹಾರವನ್ನು ಹರಿದು ತಿನ್ನಲು ಅನುಕೂಲವಾಗುವಂತೆ ರಚನೆಯಾಗಿದೆ.

ಮೇಲಿನ ಸಸ್ಯಾಹಾರೀ ಜಂತುಗಳ ಮತ್ತು ಮಾಂಸಾಹಾರೀ ಜಂತುಗಳ ವ್ಯತ್ಯಾಸವನ್ನು ಎತ್ತಿ ತೋರಿಸುವಂತಹ ದೃಷ್ಟಾಂತಗಳನ್ನು ನೋಡುವಾಗ ಮಾನವ ಕೇವಲ ಸಸ್ಯಾಹಾರಿ ಎಂಬುದನ್ನು ಕಂಡುಕೊಳ್ಳುತ್ತೇವೆ.

ಸಸ್ಯಗಳ ಫಲವನ್ನು ಕೀಳುವಾಗ ಅವುಗಳಿಗೂ ನೋವಾಗುವುದಿಲ್ಲವೇ? ಇದರಿಂದ ಹಿಂಸಾದೋಷ ಉದ್ಭವಿಸಿ ಬರದೇ? ಎನ್ನುವ ಪ್ರಶ್ನೆ ಸಹಜವಾಗಿಯೇ ಉದಿಸುತ್ತದೆ. ಸಸ್ಯಗಳೆಲ್ಲ ಅಭಿಮಾನೀಜೀವರುಗಳಲ್ಲ. ಅವುಗಳು ಅಭಿಮಾನರಹಿತರಾದ ಅನುಶಾಯಿ ಜೀವರುಗಳು. ಅವುಗಳು ಜಾಗ್ರತ್, ಸುಷುಪ್ತಿ ಹಾಗೂ ಸ್ವಪ್ನಾವಸ್ಥೆಗಳಲ್ಲಿ ಅಭಿಮಾನರಹಿತರಾಗಿ ಇರತಕ್ಕವರು. ಮನೋರಹಿತರಾಗಿರುವುದರಿಂದ ಅವುಗಳಿಗೆ ಸುಖವಾಗಲೀ, ನೋವಾಗಲೀ ಅವುಗಳಿಗಾಗುವುದಿಲ್ಲ. ಈ ಕಾರಣದಿಂದ ಅವುಗಳ ಭಾಗಗಳನ್ನು ಕಿತ್ತರೂ ಹಿಂಸಾದೋಷವಿಲ್ಲ. ಅಲ್ಲದೆ ಅವುಗಳ ಭಾಗಗಳನ್ನು ಕಿತ್ತರೂ ಪುನಃ ಹುಟ್ಟಿಬರುತ್ತದೆ. ಮನುಷ್ಯನ ಉಗುರು,ರೋಮಗಳನ್ನು ಕತ್ತರಿಸಿದಾಗಲೂ ಪುನಃ ಹುಟ್ಟಿಬರುವಂತೆ. ಆದರೆ ಪ್ರಾಣಿಗಳ ಕಿವಿಯನ್ನಾಗಲೀ ಕತ್ತರಿಸಿದರೆ ಪುನಃ ಹುಟ್ಟಿಬರುವುದಿಲ್ಲ. ನಮ್ಮ ದೇಶದಲ್ಲಿ ಅನ್ನ ಪ್ರಶ್ನೆ ಬಹಳ ಮುಖ್ಯವೇ ಹೊರತು ಅದನ್ನು ರುಚಿಕರವಾಗಿ ಮಾಡುವ ಉಪಪದಾರ್ಥಗಳ ವಿಷಯ ದೊಡ್ಡದಲ್ಲ. ಅನ್ನವನ್ನು ತಿನ್ನಲು ಯೋಗ್ಯವನ್ನಾಗಿ ಮಾಡುವ ಉಪಪದಾರ್ಥಗಳ ಸಮಸ್ಯೆ ತುಂಬಾ ಗೌಣವೆಂದಮೇಲೆ ಮೀನು, ಮೊಟ್ಟೆ ಇತ್ಯಾದಿಗಳ ಮೇಲೆ ಅವಲಂಬಿಸುವುದು ಮಾನವ ಸಂಸ್ಕೃತಿಗೆ ಮಾರಕ.

ಬಲದ ಪ್ರಶ್ನೆಯನ್ನೆತ್ತಿಕೊಂಡಾಗಲೂ ಮಾಂಸದಲ್ಲಿ ಬಲವೇನೂ ಇಲ್ಲ. ಸಸ್ಯಗಳಲ್ಲಿರುವಷ್ಟು ಕಬ್ಬಿಣ, ರಂಜಕ ಮೊದಲಾದ ಧಾತುಗಳ ಪ್ರಮಾಣ ಮಾಂಸದಲ್ಲಿ ಕಂಡುಬರುವುದಿಲ್ಲ. ಆನೆಯ ಶರೀರಬಲದ ಪ್ರಮಾಣ ಸಿಂಹಕ್ಕಿಂತ ಎಷ್ಟೋ ಪಟ್ಟು ಹೆಚ್ಚು. ಆದರೆ ಉಗುರು, ಹಲ್ಲು ಇತ್ಯಾದಿ ಆಯುಧಗಳಿಂದ ಸಿಂಹ ಆನೆಯ ಮೇಲೆ ಹತೋಟಿ ತರುತ್ತದೆಯೇ ಹೊರತು ಶರೀರ ಬಲದ ಪ್ರಮಾಣ ಸಿಂಹಕ್ಕಿಂತ ಆನೆಯದೇ ಅತ್ಯಂತ ಹೆಚ್ಚಿನದು.

ಇತ್ತೀಚಿನ ಸಂಶೋಧನೆಗಳೂ ಮಾನವ ಕೇವಲ ಸಸ್ಯಾಹಾರಿ ಮತ್ತು ಸಸ್ಯಾಹಾರದಲ್ಲಿಯೇ ಬಲದ ಪ್ರಮಾಣ ಜಾಸ್ತಿ ಎನ್ನುವುದನ್ನು ಸಮರ್ಥಿಸಿವೆ.

ಮಾನವನ ಚರಮೋದ್ದೇಶ್ಯವಾದ ಈಶ್ವರ ಸಾಕ್ಷಾತ್ಕಾರದಲ್ಲಿಯೂ ಮಾಂಸ ಭೋಜನ ಒಂದು ದೊಡ್ಡ ಪರಿಪಂಥಿ ಎನ್ನುವುದು ಸ್ಪಷ್ಟ. ಸಾತ್ವಿಕ ಭಾವನೆಗಳ ಉದಯ ಸಾತ್ವಿಕವೆನಿಸಿದ ಆಹಾರಗಳಿಂದಲೇ ಸಾಧ್ಯವಲ್ಲದೆ ತಾಮಸಿಕ ಪದಾರ್ಥಗಳು ಇದಕ್ಕೆ ಅಡ್ಡಿಯನ್ನುಂಟುಮಾಡುತ್ತದೆ. ಈ ಎಲ್ಲಾ ನಿದರ್ಶನಗಳಿಂದ ಮಾಂಸಭೋಜನ ಮನುಷ್ಯನಿಗೆ ಆತ್ಮಪತನಹೇತುವೆನಿಸಲ್ಪಟ್ಟು ನಿಷಿದ್ಧವಾಗುತ್ತದೆ ಎಂಬುದು ಗೊತ್ತಾಗುತ್ತದೆ.

**ಓಂ ಶಮ್**

# ವೇದಪ್ರಚಾರ ನಿಧಿಗೆ ದಾನ

ಶ್ರೀ ಎನ್. ಸುಭಾಸ ಕುಡ್ವ, ಎರ್ನಾಕುಲಂ—ಇವರು ದಿನಾಂಕ ೨೯-೪-೮೩ ರಂದು ಜರಗಿದ ತಮ್ಮ ಸುಪುತ್ರ ಚಿ| ರಾಮನಾಥ ಹಾಗೂ ತಮ್ಮ ಸೋದರರಾದ ಶ್ರೀ ಎನ್. ಪ್ರಭಾಕರ ಕುಡ್ವರ ಸುಪುತ್ರ ಚಿ| ದೀಪಕ್ ಇವರುಗಳ ಬ್ರಹ್ಮೋಪದೇಶದ ಸವಿನೆನಪಿಗಾಗಿ ವೇದಪ್ರಚಾರ ನಿಧಿಗೆ ರೂ. ೧೧೦-೦೦ನ್ನು ದಾನವಾಗಿ ಸಮರ್ಪಿಸಿದ್ದಾರೆ.

ಬ್ರಹ್ಮಚಾರಿಗಳೀರ್ವರೂ ವಿದ್ಯಾವಿನಯ ಸಂಪನ್ನರೂ, ಆರೋಗ್ಯಾದಿ ಸೌಭಾಗ್ಯಗಳಿಂದ ಕೂಡಿದವರೂ ಆಗಿ ಉತ್ತರೋತ್ತರ ಅಭಿವೃದ್ಧಿಯನ್ನು ಸಾಧಿಸಲಿ ಎಂದು ಹೃತ್ಪೂರ್ವಕ ಹರಸುವೆವು.

ಶ್ರೀಮತಿ ಸುನಂದಾದೇವಿ ಕಾಮತ್, ಮಂಗಳೂರು-ಇವರು ದಿನಾಂಕ ೭-೫-೮೩ ರಂದು ತಮ್ಮ ೩೯ನೇ ಜನ್ಮ ದಿನವನ್ನು ಆಚರಿಸುತ್ತಾ, ಅದರ ಸವಿನೆನಪಿಗಾಗಿ ವೇದಪ್ರಚಾರ ನಿಧಿಗೆ ರೂ. ೧೦೫-೦೦ನ್ನು ದಾನವಾಗಿ ಅರ್ಪಿಸಿದ್ದಾರೆ.

ಶ್ರೀಮತಿಯವರು ಸಮಸ್ತ ಸೌಭಾಗ್ಯಗಳನ್ನೂ ಸಂತಾನ ಲಾಭವನ್ನೂ ಹೊಂದಿ ಸುಖದಿಂದ ಜೀವಿಸುವಂತೆ ಅನುಗ್ರಹಿಸಲೆಂದು ಪರಮಾತ್ಮನಲ್ಲಿ ಹೃತ್ಪೂರ್ವಕವಾಗಿ ಪ್ರಾರ್ಥಿಸುತ್ತೇವೆ.

ಶ್ರೀ ಪಿ. ಸುದರ್ಶನ ಕಾಮತ್‌ರವರು ಉಡುಪಿಯ ಹಯಗ್ರೀವನಗರದಲ್ಲಿ ಕಟ್ಟಿಸಿರುವ ತಮ್ಮ ನೂತನ ಗೃಹ **"ಸುಪರ್ಣ"**ದ 'ಗೃಹ ಪ್ರವೇಶ'ವನ್ನು ವೇದೋಕ್ತ ವಿಧಿಯಿಂದ ನೆರವೇರಿಸಿ ಅದರ ಸವಿನೆನಪಿಗಾಗಿ ವೇದಪ್ರಚಾರ ನಿಧಿಗೆ ರೂ. ೫೦೧-೦೦ನ್ನು ದಾನವಾಗಿ ಸಮರ್ಪಿಸಿದ್ದಾರೆ.

ಶ್ರೀಯುತರು ತಮ್ಮ ಪರಿವಾರ ಸಹಿತರಾಗಿ ಎಲ್ಲಾ ಅಭೀಷ್ಟಗಳನ್ನು ಹೊಂದಿ, ಧರ್ಮಾತ್ಮರಾಗಿ ಆದರ್ಶಮಯ ಜೀವನದಿಂದ ಸರ್ವಾನಂದ ಪ್ರದರಾಗಿ ಬಾಳಲೆಂದು ಪರಮಾತ್ಮನಲ್ಲಿ ಪ್ರಾರ್ಥಿಸುತ್ತಾ ಹೃತ್ಪೂರ್ವಕವಾಗಿ ಹರಸುತ್ತೇವೆ.

ಶ್ರೀ ಐ. ನಾಮದೇವ ಪ್ರಭುಗಳು, ಗಂಟಾಲಕಟ್ಟೆ, ದ. ಕ.—ಇವರು ತಮ್ಮ ಸುಪುತ್ರ ಚಿ| ಗಣೇಶ ಪ್ರಸಾದನ ಚೂಡಾಕರ್ಮ ಸಂಸ್ಕಾರವನ್ನು ದಿನಾಂಕ ೧೬-೫-೮೩ ರಂದು ಆಚರಿಸಿ ಅದರ ಸವಿನೆನಪಿಗಾಗಿ ವೇದಪ್ರಚಾರ ನಿಧಿಗೆ ರೂ. ೨೫-೦೦ನ್ನು ದಾನವಾಗಿ ಸಮರ್ಪಿಸಿದ್ದಾರೆ.

ಚಿರಂಜೀವಿಯು ಆಯುರಾರೋಗ್ಯಗಳಿಂದ ಸುಶೋಭಿತನಾಗಿ ಮಾತಾಪಿತೃ ಗುರು ಹಿರಿಯರೆಲ್ಲರಿಗೂ ಹರ್ಷವನ್ನುಂಟುಮಾಡುತ್ತಾ ವರ್ಧಿಸಲಿ ಎಂದು ಹಾರ್ದಿಕವಾಗಿ ಹರಸುವೆವು.

ಶ್ರೀ ಗೋವಿಂದ ಪ್ರಭು, ಮಲಾಡ್, ಮುಂಬಯಿ- ಇವರು ತಮ್ಮ ಸೋದರಿ ಚಿ| ಸೌ| ಗಿರಿಜರವರ ವಿವಾಹವನ್ನು ಶ್ರೀ ನಾರಾಯಣರೊಡನೆ ನೆರವೇರಿಸಿದ ಸವಿನೆನಪಿಗಾಗಿ ವೇದಪ್ರಚಾರ ನಿಧಿಗೆ ರೂ. ೨೫-೦೦ನ್ನು ದಾನವಾಗಿ ಸಮರ್ಪಿಸಿದ್ದಾರೆ.

ನೂತನ ದಂಪತಿಗಳು ಆದರ್ಶಗೃಹಸ್ಥಾಶ್ರಮ ಜೀವನವನ್ನು ಆಚರಿಸುತ್ತಾ ಧರ್ಮಾತ್ಮರೂ, ಸಕಲ ಸೌಭಾಗ್ಯಯುಕ್ತರೂ ಆಗಿ ಸುಖದಿಂದ ಬಾಳುವಂತೆ ಅನುಗ್ರಹಿಸಲೆಂದು ಪರಮಾತ್ಮನಲ್ಲಿ ಪ್ರಾರ್ಥಿಸುತ್ತೇವೆ.

ಶ್ರೀಮತಿ ಸುಷಮಾದೇವಿ-ಶ್ರೀ ಸುಭಾಷ್ಚಂದ್ರ ಕಾಮತ್, ಬೂಕ್‌ಲಿನ್-ನ್ಯೂಯಾರ್ಕ್-ಇವರು ತಮ್ಮ ಸುಪುತ್ರ ಚಿ| ಸುನೀಲನ ಹಾಗೂ ಸುಪುತ್ರಿ ಸುನೀತಾಳ ಹುಟ್ಟು ಹಬ್ಬಗಳನ್ನು ಆಚರಿಸಿ, ಅದರ ಸವಿನೆನಪಿಗಾಗಿ ವೇದಪ್ರಚಾರ ನಿಧಿಗೆ ರೂ. ೨೧೦-೦೦ನ್ನು ದಾನವಾಗಿ ಸಮರ್ಪಿಸಿದ್ದಾರೆ.

ಚಿರಂಜೀವಿಗಳೀರ್ವರೂ ಆಯುರಾರೋಗ್ಯಗಳಿಂದಲೂ, ವಿದ್ಯಾವಿನಯಾದಿಗಳಿಂದಲೂ ಕಂಗೊಳಿಸುತ್ತಾ, ಪಾಶ್ಚಿಮಾತ್ಯ ಸಭ್ಯತೆಯ ನಡುವೆ ಬೆಳೆಯುತ್ತಿದ್ದರೂ, ಭಾರತೀಯ ಸಂಸ್ಕೃತಿಯ ಪ್ರತೀಕಗಳಾಗಲಿ ಎಂದು ಹಾರೈಸುತ್ತಾ ಹೃತ್ಪೂರ್ವಕ ಹರಸುವೆವು.

—ವೈದಿಕ ಸಾಹಿತ್ಯ ಪ್ರಕಾಶನ ಸಮಿತಿ.

## ರೂ. ೧೫೦—೦೦ ಸಲ್ಲಿಸಿದ ಆಜೀವ ಸದಸ್ಯರು.

೧೧೪೭ ಶ್ರೀ ರಾಮನಾಥ, ಜಿ. ಶೆಟ್ಟಿ, ಚಿಮಟಪಾಡ, ಮುಂಬಯಿ.
೧೧೪೮ ಶ್ರೀ ಕೃಷ್ಣಮಯ್ಯ, ಸ್ಟೇಟ್ ಬ್ಯಾಂಕ್ ಆಫ್ ಟ್ರಾವಂಕೋರ್, ಬೆಂಗಳೂರು-೧೮.
೧೧೪೯ ಶ್ರೀ ಇ. ಕುಶಲ, ಜೀವವಿಮಾ ಕಛೇರಿ, ಕಾಸರಗೋಡು.
೧೧೫೦ ಶ್ರೀ ಎ. ಎಸ್. ಸೋಮಶೇಖರ, ಚಾಮರಾಜಪೇಟೆ, ಬೆಂಗಳೂರು.
೧೧೫೧ ಶ್ರೀ ಟಿ. ರಾಮಚಂದ್ರಪ್ಪ, ಬಿ. ಇ. ಶಾಂತಿನಗರ, ಬೆಂಗಳೂರು.
೧೧೫೨ ಶ್ರೀ ಎಸ್. ಎ. ವೆಂಕಟೇಶ್, ಕಬ್ಬನ್ ಪೇಟೆ, ಬೆಂಗಳೂರು.
೧೧೫೩ ಶ್ರೀ ಬಿ. ಆರ್. ಸುಬ್ಬರಾವ್, ಮಲ್ಲೇಶ್ವರಂ, ಬೆಂಗಳೂರು.
೧೧೫೪ ಶ್ರೀ ಟಿ. ಆರ್. ಗಂಗಾಧರ, ಕಬ್ಬನ್ ಪೇಟೆ, ಬೆಂಗಳೂರು.
೧೧೫೫ ಶ್ರೀ ಟಿ. ಅನಂತರಾಮ ಶೆಟ್ಟಿ, ಅಂಬಿಕಾ ಹಾಲ್, ಮಂಡಿಪೇಟೆ, ತುಮಕೂರು.
೧೧೫೬ ಶ್ರೀ ವಿ. ಎಸ್. ಕಾರಂತ, ಮಾರ್ಕೆಟ್, ಬಾಗಲಕೋಟೆ.
೧೧೫೭ ಶ್ರೀ ಕೆ. ಪಾಂಡುರಂಗ ನಾಯಕ್, (ಸಿಂಡಿಕೇಟ್ ಬ್ಯಾಂಕ್) ಹಿರಿಯಡ್ಕ.
೧೧೫೮ ಡಾ| ಎಂ. ಕರುಣಾಕರ ಶೆಟ್ಟಿ, ಉಷಾ ಕ್ಲಿನಿಕ್, ಬಾಳೆಹೊನ್ನೂರು.

Veda Prakash R. No. 27437/75 Regd. No. KRNR 13/75-76